# ಹೊಸದಿಕ್ಕು

ಒ, ಸಾಹಿತ್ಯಿಕ-ಸಾಂಸ್ಕೃತಿಕ ದ್ವೈಮಾಸಿಕ ಪತ್ರಿಕೆ.

Shankar Patil.

— ಪ್ರಥಮ ವಾರ್ಷಿಕೋತ್ಸವದ ವಿಶೇಷ ಸಂಚಿಕೆ. —

* ಖಾಸಗಿ ಪ್ರಸಾರಕ್ಕಾಗಿ ಮಾತ್ರ

# ಹೊಸ ದಿಕ್ಕು ಸಾಹಿತ್ಯಿಕ-ಸಾಂಸ್ಕೃತಿಕ ದ್ವೈಮಾಸಿಕ

ಸಂಪುಟ-೧ ಸಂಚಿಕೆ-೨ ಮಾರ್ಚ-ಏಪ್ರಿಲ್ ೯೩

ಸಂಪಾದಕ : **ತಿಮ್ಮಯ್ಯ ಪುರ್ಲೆ**
ಸಲಹೆ : ಚಂದ್ರಕಾಂತ ಕರದಳ್ಳಿ, ಎಸ್. ಬಿ. ಹೊಸ್ಕಲ್, ಸೂಗಯ್ಯ ಹಿರೇಮಠ

ನೀವು ಕಳಿಸುವ ಚಂದಾ "ಹೊಸ ದಿಕ್ಕು" ಬೆಳವಣಿಗೆಯ ಸಂಕೇತ

ವಾರ್ಷಿಕ ಚಂದಾ : ರೂ. ೫೦-೦೦ ✣ ಆಜೀವ ಚಂದಾ : ರೂ. ೫೦೦-೦೦

ಹೈದರಾಬಾದ ಕರ್ನಾಟಕ ಹಾಗು ಸುತ್ತಲಿನ ಬಿಜಾಪುರ, ಬಳ್ಳಾರಿ ಜಿಲ್ಲೆಗಳ ಲೇಖಕರಿಗೆ ಹೆಚ್ಚಿನ ಪ್ರಾತಿನಿಧ್ಯ ನೀಡುವ ಮೂಲಕ ಕನ್ನಡ ನಾಡಿನಾದ್ಯಂತ ತಲುಪಲು ಇಚ್ಛಿಸುವ "ಹೊಸ ದಿಕ್ಕು"ಗೆ ದಯವಿಟ್ಟು ನೀವು ಚಂದಾದಾರರಾಗಿ, ನಿಮ್ಮ ಸ್ನೇಹಿತರನ್ನು, ಆಸಕ್ತರನ್ನು ಚಂದಾದಾರರಾಗಿಸಿರಿ. ಲೇಖನ, ಕವನ, ಕಥೆ ಇತ್ಯಾದಿ ಕಳಿಸುವವರು ಸ್ವೀಕೃತಿ ಬಗ್ಗೆ ತಿಳಿಯಲು ಸ್ವವಿಳಾಸದ ಕಾರ್ಡು ಇಡಿ. ಅಂದವಾಗಿ ಬರೆದು ಅಥವಾ ಸುಂದರವಾಗಿ ಟೈಪು ಮಾಡಿಸಿ ಕಳಿಸಿರಿ, ಸದಸ್ಯರಾಗಿ ಪತ್ರಿಕೆಗೆ ಬರಹ ಕಳಿಸಿರಿ.

ಸಂಪಾದಕರು :
"ಹೊಸ ದಿಕ್ಕು"
ಗೀತಾಂಜಲಿ ಬಿಲ್ಡಿಂಗ್
(ದಿಗ್ಗಿ ಬಿಲ್ಡಿಂಗ್ ಹತ್ತಿರ)
ಅಂಚೆ : ಶಹಾಪೂರ-೫೮೫ ೨೨೩

ಚಂದಾ ಕಳಿಸುವ ವಿಳಾಸ :
ಚಂದ್ರಕಾಂತ ಕರದಳ್ಳಿ
ಶಹಾಪೂರ ಪೇಟ,
ಶಹಾಪೂರ ೫೮೫ ೨೨೩
ಕಲಬುರ್ಗಿ ಜಿಲ್ಲೆ (ಕರ್ನಾಟಕ)

# ಪತ್ರಿಕೆಯ ಅಂತರಂಗದಿಂದ ನಿಮ್ಮ ಅಂತರಂಗಕ್ಕೆ

೯೩ರ ಮಾರ್ಚ್-ಏಪ್ರಿಲ್ ಸಂಚಿಕೆಯನ್ನು ತಮ್ಮ ಕೈಯಲ್ಲಿಡಲು ಹರ್ಷವಾಗುತ್ತಿದೆ. ಈ ಸಂದರ್ಭದಲ್ಲಿ ಪತ್ರಿಕೆಗೆ ಒಂದು ವರ್ಷ. ಮಗುವೊಂದು ಅಂಬೆಗಾಲಿಟ್ಟು ಕೈ ಸನ್ನೆ ಬಾಯಿ ಸನ್ನೆಗಳಿಂದ ಚಲನ-ವಲನವನ್ನು ನಿರೀಕ್ಷಿಸುತ್ತಾ, ಕೇಕೇ ಹಾಕಿದ ಮುಗ್ಧ ಮನಸ್ಸಿನಂತೆ ಪತ್ರಿಕೆಯ ವಯಸ್ಸು. ಪತ್ರಿಕೆಯಿಂದ ಏನನ್ನೂ ನಿರೀಕ್ಷಿಸದೆ ಈ ಭಾಗದ ಸಾಹಿತ್ಯ ಲೋಕಕ್ಕೆ ಒಂದು ವೇದಿಕೆಯನ್ನೇರ್ಪಡಿಸ ಬೇಕೆಂಬ ನಮ್ಮ ಆಸೆಗೆ ಅಷ್ಟೊಂದು ಸಾಹಿತ್ಯ ಬರವಣಿಗೆಯ ಬಾಗಿಲು ತೆರೆಯಲಿಲ್ಲ. ಸಾಹಿತ್ಯವೇನೋ ಸಾಕಷ್ಟು ಬಂತು. ಗಟ್ಟಿತನವಿರಲಿಲ್ಲ. ಪತ್ರಿಕೆಯ ವೈಚಾರಿಕ ನಿಲುವಿಗೆ ನಿಲುಕುವ ಲೇಖನಗಳು ಬರಲಿಲ್ಲ. ಬಂದುದರಲ್ಲೇ ಆಯ್ದುಕೊಂಡು ಪತ್ರಿಕೆಯ ಗಟ್ಟಿತನಕ್ಕೆ ಒಪ್ಪುವ ಲೇಖನಗಳನ್ನು ಕಥೆ ಕವಿತೆಗಳನ್ನು ಒಪ್ಪ ಓರಣ ಮಾಡಿ ಪತ್ರಿಕೆಯನ್ನು ಕೊಟ್ಟಿದ್ದೇವೆ.

ಒಟ್ಟಾರೆಯಾಗಿ ನಾವು ಪತ್ರಿಕೆಯ ಮೊದಲ ಸಂಚಿಕೆಯ ಸಂಪಾದಕೀಯ-ದಲ್ಲಿ ತಿಳಿಸಿದಂತೆ ಲೇಖನಗಳ ಮಹಾಪೂರವೆ ಹರಿದು ಬರುವುದೇನೋ ಎಂದು ನಿರೀಕ್ಷಿಸಿದ್ದೆವು. ಆ ನಿರೀಕ್ಷೆ ಹುಸಿಯಾಯಿತು. ಅದಕ್ಕೆ ಕಾರಣಗಳೂ ಇರಬಹುದು ಇಲ್ಲವೆಂದು ಹೇಳಲಿಕ್ಕಾಗುವುದಿಲ್ಲ.

ಯಾವುದೇ ಒಂದು ಪತ್ರಿಕೆ ಬಾಳಿ ಬದುಕಬೇಕಾದರೆ ಆರ್ಥಿಕ ವ್ಯವಸ್ಥೆ ಮುಖ್ಯ, ಪತ್ರಿಕೆಗೆ ಆರ್ಥಿಕ ಆಯಾಮ ದೊರಕುವುದು ಮುಮ್ಮುಖಗಳಿಂದ ಒಂದು ಚಂದಾದಾರರು ಎರಡು ಜಾಹೀರಾತುದಾರರು ಮೂರು ಆಜೀವ ಸದಸ್ಯರು ಈ ಮೂರು ಮುಖ್ಯ ಬಾಬುಗಳಲ್ಲಿ ಪತ್ರಿಕೆ ತನ್ನತನವನ್ನು ಉಳಿಸಿಕೊಳ್ಳ-ಬೇಕಾಗುತ್ತದೆ.

ಆರಂಭದಲ್ಲಿ ಪತ್ರಿಕೆಯ ಚಂದಾದಾರರನ್ನಾಗಿ ಮಾಡಿಕೊಂಡೆವು. ಕೆಲವು ಜನ ಚಂದಾ ಹಣವನ್ನು ಕೊಟ್ಟರು. ಇನ್ನೂ ಕೆಲವರು ಕೊಟ್ಟಿಲ್ಲ. ಅವರು ಕೊಟ್ಟಿಲ್ಲ ಎನ್ನುವುದಕ್ಕಿಂತ ಎದುರಾ ಎದುರೇ ಭೆಟ್ಟಿಯಾದರೂ ನಾವು ಕೇಳಿಲ್ಲ. ಕೇಳುವುದು ಚನ್ನಲ್ಲ, ಇಂದಲ್ಲ ನಾಳೆ ಕೊಡಬಹುದು ಎಂಬ ನಿರೀಕ್ಷೆಯಿಂದ ಕಾಯುತ್ತಿದ್ದೇವೆ, ಪತ್ರಿಕೆಯು ಒಂದು ವರ್ಷ ಪೂರೈಸಿದ್ದು ಜಾಹೀರಾತಿನ ಹಣದಿಂದ ಎಂಬ ಮಾತನ್ನು ಹೇಳಲೇಬೇಕಾಗುತ್ತದೆ. ಈ ಜಾಹೀರಾತಿನಲ್ಲಿ ಪೂರ್ಣ ಹಣ ಬಂದಿಲ್ಲ, ಬಂದಿಲ್ಲ ಎನ್ನುವುದಕ್ಕೆ ಹಿಂದೆ ಬಿದ್ದು ಕೇಳಿಲ್ಲ. ಕೇಳಿದರೆ ಕೊಡುತ್ತಾರೆ ಎಂಬ ಭರವಸೆಯಿಂದ ಪತ್ರಿಕೆಯನ್ನಂತೂ ಒಂದು ವರ್ಷಕ್ಕೆ ತಂದು ಮುಟ್ಟಿಸಿದ್ದೇವೆ.

ಪತ್ರಿಕೆಯು ಎರಡನೆ ವರ್ಷದ ಮೊದಲ ಸಂಚಿಕೆ ಹೊರ ಬರುವಷ್ಟರಲ್ಲಿ ಚಂದಾದಾರರು ಈ ಭಾಗದ ಬರಹಗಾರರು, ಪತ್ರಿಕೆಯ ಅಭಿಮಾನಿಗಳು ಪತ್ರಿಕೆಯ ಮುಂದುವರಿಕೆ ಕುರಿತು ತಮ್ಮ ನಿರ್ದಾಕ್ಷಿಣ್ಯವಾದ ಸಲಹೆ ಸೂಚನೆಗಳನ್ನು ಸಾಹಿತ್ಯ ಲೋಕದ ಕಾಳಜಿವುಳ್ಳವರೆಲ್ಲರೂ ನೀಡಬೇಕಾಗಿ ಕೇಳಿಕೊಳ್ಳುತ್ತೇನೆ.

ಪತ್ರಿಕೆಗೆ ಬಂದ ಲೇಖನಗಳಲ್ಲಿ ಕಾವ್ಯವೇ ಹೆಚ್ಚು. ಕಥೆ, ಪ್ರಬಂಧ· ಹರಟೆ, ವೈಚಾರಿಕ ಲೇಖನಗಳು, ಪುಸ್ತಕ ವಿಮರ್ಶೆ, ವಿಡಂಬನೆಗಳು ಬರಲೇ ಇಲ್ಲ. ಒಂದು ವೇಳೆ ಪತ್ರಿಕೆಗೆ ಬಂದ ಕಾವ್ಯವನ್ನೇ ಪ್ರಕಟಿಸಿದರೂ ಎರಡು ಮೂರು ಸಂಕಲನಗಳಾಗುವಷ್ಟು ಇವೆ. ಅವನ್ನ ಪ್ರಕಟಿಸಿದರೆ ಮತ್ತೊಂದು ಕವನ ಸಂಕಲನ-ವಾಗುವ ಭಯವಿದೆ.

ಪತ್ರಿಕೆಯ ವಿನ್ಯಾಸ, ಮುದ್ರಣ ಬದಲಾವಣೆಗೊಳಿಸಬೇಕಾದರೆ ತಕ್ಕ ವ್ಯವಸ್ಥೆ ಇಲ್ಲ, ಇದ್ದುದರಲ್ಲೇ ಎಲ್ಲವನ್ನು ಕಾಯ್ದುಕೊಳ್ಳಬೇಕಾಗಿದೆ. ಐದನೇ ಸಂಚಿಕೆ ಹಾಗೂ ಆರನೆಯ ಸಂಚಿಕೆಯ ಮುದ್ರಣವನ್ನು ಶಹಾಪುರದಲ್ಲಿ "ಪ್ರರೆಲ್ಲ ಪ್ರಿಂಟರ್ಸ್"ನಲ್ಲಿ ಮುದ್ರಿಸಲಾಗಿದೆ. ಇನ್ನೂ ಮುಂದೆಯೂ ಇಲ್ಲಿಯೇ ಮುದ್ರಣ-ಗೊಳ್ಳಲಿದೆ. ಪತ್ರಿಕೆಯ ತಾಜಾತನ, ಮತ್ತು ವೈವಿಧ್ಯತೆಗಾಗಿ ತಡಕಾಡುತ್ತಿದ್ದೇವೆ, ಇಂಥ ಸಾಹಿತ್ಯಿಕ ಪತ್ರಿಕೆಗೆ ಆಸಕ್ತ ಮನಸ್ಸಿನ ಬರಹಗಾರರಿಲ್ಲದೆ ಪತ್ರಿಕೆ ಬದುಕುವು-ದಾದರೂ ಹೇಗೆ? ಸೃಜನಶೀಲ ಮನಸ್ಸುಳ್ಳ ಬರಹಗಾರರು "ಹೊಸ ದಿಕ್ಕು" ಪತ್ರಿಕೆಗೆ ವೈಚಾರಿಕ ಹಿನ್ನಲೆಯ ಲೇಖನಗಳನ್ನು ಕಳಿಸಿದರೆ ಪತ್ರಿಕೆಯ ಹುಟ್ಟು ಸಾರ್ಥಕ. ಇಲ್ಲದಿದ್ದಲ್ಲಿ ಹತ್ತರ ಕೂಡ ಹನ್ನೊಂದಾಗುವ ಸಂಭವವಿದೆ.

ಒಂದು ವರ್ಷದ ಚಂದಾ ಹಣ ಕೊಟ್ಟವರ ಅವಧಿಯು ಮುಗಿಯಿತು. ಜೊತೆಗೆ ಎರಡನೇ ವರ್ಷಕ್ಕಾಗಿ ಚಂದಾ ಹಣವನ್ನು ಕೊಡಬೇಕಾಗಿ ವಿನಂತಿ-ಸುತ್ತೇವೆ. ಈ ಹಿಂದೆ ಕೊಡದವರು ಎರಡು ವರ್ಷದ ಚಂದಾ ಕೊಟ್ಟು ಪತ್ರಿಕೆಯ ಏಳ್ಗೆಗಾಗಿ ತಮ್ಮ ಕಳ್ಳಬಳ್ಳಿಯ ಕಕ್ಕುಲಾತಿಯನ್ನು ತೋರಿಸಿ ಪತ್ರಿಕೆಯ ಮುನ್ನಡೆ-ಗಾಗಿ ಸಹಕರಿಸುತ್ತಾರೆಂದು ನಂಬುತ್ತೇನೆ.

ವರ್ಷ ತುಂಬಿದ ಈ ಸಂದರ್ಭದಲ್ಲಿ ದಾವಣಗೆರೆಯ ಹಿರಿಯ ಕಲಾವಿದ ಶಂಕರ ಪಾಟೀಲ ಪತ್ರಿಕೆಯ ಮೇಲಿನ ಪ್ರೀತಿ ಅಭಿಮಾನ ತುಂಬಿ ಸ್ವಇಚ್ಛೆಯಿಂದ ಮುಖಪುಟದ ಬ್ಲಾಕನ್ನು ಕಳಿಸಿದ್ದಾರೆ. ಪತ್ರಿಕೆಯ ಬಳಗವು ಅವರಿಗೆ ಕೃತಜ್ಞತೆಗಳನ್ನು ಅರ್ಪಿಸುತ್ತದೆ.

ಚಂ. ಕ.

 ಡಾ. ರಹಮತ್ ತರೀಕೆರೆ

# ಸಂಸ್ಕೃತಿ ; ಪೂರ್ವಗ್ರಹ ಮತ್ತು ಗುಂದ್ಯಾಟಗಳು

ನಮ್ಮ ದೇಶಕ್ಕೆ ಒಂದೇ ಭಾಷೆ, ಧರ್ಮ, ಸಂಸ್ಕೃತಿ, ಜನಾಂಗ ಇದ್ದಿದ್ದರೆ ಇಷ್ಟೊಂದು ದ್ವೇಷ-ಜಗಳಗಳು ಇರುತ್ತಿರಲಿಲ್ಲವೇನೊ? ಹಲವಾರು ಭಾಷೆ-ಧರ್ಮ, ಸಂಸ್ಕೃತಿ, ಬದುಕಿನ ವಿಧಾನಗಳು ಇರುವುದೇ ನಮ್ಮ ವಿಶೇಷ (ಇವುಗಳ ಹೆಸರಿನಲ್ಲಿ ಈ ಹೊತ್ತು ನಡೆಯುತ್ತಿರುವ ಗಲಭೆಗಳನ್ನು ನೆನೆದರೆ ಇದೇ ನಮ್ಮ ದೌರ್ಭಾಗ್ಯ) ಯಾವ ಬಹುಮುಖಿತನ ನಿಜವಾಗಿ ನಾವು ಹೆಮ್ಮೆ ಪಡಯಬಹುದಾದ 'ವಿಶೇಷತೆ'ಯಾಗಿದೆಯೋ, ಅದು ನಮ್ಮ 'ದುರಂತ'ಗಳಿಗೆ ಕಾರಣವಾಗಿರುವುದು ಹೇಗೆ ಮತ್ತು ಯಾಕೆ? ಇದಕ್ಕೆ ಉತ್ತರ ನಮ್ಮ ತಪ್ಪು ತಿಳುವಳಿಕೆ. ಕೆಲವು ಸಲ ಬೇಕೆಂದೇ ತಪ್ಪಾಗಿ ತಿಳಿಯುವಿಕೆ. ಭಾರತದಲ್ಲಿ ಇರುವ ಈ ವಿಭಿನ್ನ ಭಾಷೆ, ಧರ್ಮ, ಸಂಸ್ಕೃತಿ, ಜನಾಂಗಾದಿಗಳು ಪನಸಾರೆ ಅಂಗಡಿಯಲ್ಲಿ ಬೇರೆ ಬೇರೆಯಾಗಿಟ್ಟಿರುವ ಮೂಲಿಕೆಗಳಂತೆ ಬೇರೆಬೇರೆ ಕಪಾಟುಗಳಲ್ಲಿ ಬದುಕುತ್ತಿಲ್ಲ. ಒಂದು ಮತ್ತೊಂದನ್ನು ಮುಟ್ಟುತ್ತ. ಮತ್ತೊಂದು ಇನ್ನೊಂದನ್ನು ತಾಗುತ್ತ. ಬಣ್ಣ ವಾಸನೆ ರುಚಿಗಳನ್ನು ಬೆರೆಸುತ್ತ. ಒಂದಾಗಿವೆ. ಆದರೆ ಸಂಕರ ಗೊಂಡಿವೆ. ವೈದ್ಯಕೀಯ ವಿಜ್ಞಾನದ ಪ್ರಕಾರ ಸಂಕರಶಿಶು ತುಂಬ ಆರೋಗ್ಯಕರತಾನೆ? "ನಾನು ಇನ್ನೊಂದರೊಳಗೆ ಬೆರೆಯಲಾರೆ" ಎಂದು ಹಟಮಾಡಿ ಬೇರೆ ನಿಂತದ್ದಲ್ಲ ಈ ನಾಡಿನಲ್ಲಿ ಬದುಕಿಲ್ಲ. ಉದಾ : ಸಂಸ್ಕೃತ. ಈ ಹೊತ್ತು ಸಂಸ್ಕೃತ ಬದುಕಿದ್ದರೆ ಅದು ಇನ್ನೊಂದ ಭಾಷೆಯಲ್ಲೇ ನಾವು ಯಾವುದನ್ನು ಇಂಡಿಯಾದಲ್ಲಿ ಹಿಂದು. ಇಸ್ಲಾಂ ಎನ್ನುತ್ತೇವೆಯೋ. ಅವುಗಳು ಪರಸ್ಪರ ಎಷ್ಟೊಂದು ಕೊಡುಕೊಳುಮಾಡಿವೆ? ಮೊದಲು ಹಿಂದು ಎಂಬ ಶಬ್ದವೇ. (ಸಿಂಧು ಎಂಬ ಪರ್ಶಿಯನ್ ಉಚ್ಚಾರದಲ್ಲಿ) ಪರ್ಶಿಯನ್ನರ ಕೊಡುಗೆ! ಇಂಡಿಯಾದ ಇಸ್ಲಾಂ. ಹಿಂದೂಧರ್ಮದ ತಾಳಿಬಳೆ, ಸೀರೆಗಳನ್ನು ಪಡೆದು ಹೀಗೆ ವಿಶಿಷ್ಟವಾಗಿದೆ. ವೈದಿಕದ ವಿರುದ್ಧ ಪ್ರತಿಭಟನೆಯಾಗಿ ಹುಟ್ಟಿದ ಬೌದ್ಧ, ಜೈನ ಧರ್ಮಗಳಿಂದ. ವೈದಿಕ ಧರ್ಮವು ಅಹಿಂಸೆಯ ಕಲ್ಪನೆಯನ್ನು ಸ್ವೀಕರಿಸಿತು. ಕೆಲವು ಕಟ್ಟಾ ಸನಾತನವಾದಿಗಳು ಹೇಳುವಂತೆ ಈ ದೇಶದಲ್ಲಿ ಶುದ್ಧ ಹಿಂದೂ, ಶುದ್ಧ ಇಸ್ಲಾಂ ನಿಜವಾಗಿಯೂ ಇಲ್ಲ. ಒಂದಕ್ಕೊಂದು ಬೆರಕೆಯಾಗಿರುವುದೇ ಇಲ್ಲಿರುವುದು. ಮುಸ್ಲಿಮರ ಮೊಹರಂ ಹಬ್ಬ ಗಮನಿಸಿ. ಹಿಂದುಗಳಿಲ್ಲದ ಅದು ಪೂರ್ಣಗೊಳ್ಳಲು ಸಾಧ್ಯವೇ ಇಲ್ಲ. ಇದನ್ನು ಅರ್ಥ ಮಾಡಿ ಕೊಳ್ಳುವುದೇ ನಮ್ಮ ಸಮರಸದ ಬದುಕಿಗೆ ದಾರಿ. ಈ ದೇಶ ಬೆಳೆಯುವುದಕ್ಕೆ ಹಾದಿ: ಯಾವಾಗ ನನ್ನದೇ ಶ್ರೇಷ್ಠ ಎಂದು ಒಂದು ಧರ್ಮ. ಸಂಸ್ಕೃತಿ, ಭಾಷೆಯು

ಇನ್ನೊಂದರ ಮೇಲೆ ಕೂರುವುದಕ್ಕೆ ಪ್ರಯತ್ನಿಸುತ್ತದೆಯೋ, ಆಗೆಲ್ಲ ಈ ದೇಶ ನೋವುಂಡು ನರಳಿದೆ. ಬಹುಶಃ ಈಗ ಆಗಿರುವುದೇ ಇದೇ. ಈ ದೇಶದ ಸಂಸ್ಕೃತಿ ಬರೀ ಹಿಂದೂ ಅಲ್ಲ. ಮುಸ್ಲಿಂ ಅಲ್ಲ. ಅಥವಾ ಇದಾವುದೂ ಅಲ್ಲ. ಇವೆಲ್ಲ ಸೇರಿದ ಭಾರತೀಯ ಸಂಸ್ಕೃತಿ ನಮ್ಮ ಈ ಭಾರತೀಯ ಸಂಸ್ಕೃತಿ ಅಲೂಗಡ್ಡೆಯಂತೆ ಇಲ್ಲ ಹೂಕೋಸಿನಂತೆ ಇದೆ. ಅಥವಾ ಈ ಬಗ್ಗೆ ಆರ್ನಾಲ್ಡ್ ಟಾಯಂಬಿಯು ಕೊಟ್ಟಿರುವ ರೂಪಕವೇ ಸರಿಯಾಗಿದೆ. "ಬೇರೆಬೇರೆ ಬಣ್ಣದ ನೂಲಿನ ಎಳೆಗಳಿಂದ ತಯಾರಾದ ಒಂದು ಸುಂದರ ಜಮಖಾನೆ"ಯಂತಿದೆ. ಈ ಜಮಾಖಾನೆಯಿಂದ ಯಾರಾದರೂ ಒಬ್ಬರು ತಮ್ಮ ನೂಲನ್ನು ಎಳೆದುಕೊಂಡರೆ ಇಡೀ ಜಮಖಾನವೇ ಹಾಳಾಗುತ್ತದೆ. ನಮ್ಮ ದೊಡ್ಡ ದುರಂತವೆಂದರೆ, ಇಷ್ಟೊಂದು ಸಣ್ಣ ವಿಷಯವನ್ನು ಅರಗಿಸಿ-ಕೊಳ್ಳಲು ನಮ್ಮ ಮತೀಯವಾದಿಗಳಿಗೆ, ಭಾಷಾ ಉಗ್ರವಾದಿಗಳಿಗೆ, ಜನಾಂಗ ಜಾತಿವಾದಿಗಳಿಗೆ ಆಗಿಲ್ಲದಿರುವುದು! ಅಥವಾ ಇದು ಅರ್ಥವಾಗುತ್ತಿರಬಹುದು. ಬೇರೆ ಯಾವುದೇ ಒಂದು ಸ್ವಂತ ಉದ್ದೇಶಕ್ಕಾಗಿ ಅವರು ಇದನ್ನು ಬೇಕೆಂದೇ ಒಪ್ಪುತ್ತಿಲ್ಲ. ಹಾಗಾದರೆ ಇದನ್ನು ಅವರಿಗೆ ಒಪ್ಪಿಸುವವರು ಯಾರು?

"ಸೌಜನ್ಯ : ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ."

---

ದೊಡ್ಡಬಸಪ್ಪ ಬಳೂರಗಿ

## ನಿರೀಕ್ಷೆ

ಹೊತ್ತು ಮುಳುಗುವ ಹೊತ್ತು ತುತ್ತು ಕತ್ತಿನೊಳಗಿಳಿದಿಲ್ಲ
ಬಿಸಿಲು ಬೇಗೆಯ ತಾಪ ಧರೆಗೆ ಬಾಯ್ಬಿಡುತ
ಅರೆತೆರೆದ ಚುಂಚು ಚಿಮುಟಿ....ಬಡಿದುಕೊಳ್ಳುವ ಅಳ್ಳೆಗಳು
ಕೂಗು ಗಂಟಲಲ್ಲೆ.... ಸೋತು ಸೊರಗಿ ಕಂದಿದ ಸೂರ್ಯ
ಮುಗಿಲ ಮಾಡಿನೊಳು ಚಲ್ಲಿದ ಬಣ್ಣ ವಿಶ್ವಚಿತ್ರಕಾರನ
ನವ್ಯ ಚಿತ್ರದ ಬಿತ್ತಾರ. ಬಿತ್ತರಿಸಿದೆ ಬಾನ ತುಂಬ
ಸಂಜೆ ನಂಜು ಗಗನವ್ಯಾಪಿ ಭುವಿಗೆ ಕವಿದು
ಬೂರಲ ಮರ ಮನೆಗೆ ಮರಳಿದ ಹಕ್ಕಿ
ತಪ್ಪಲಾಸರೆಗೆ ಮುಕ್ಕಿ ಗಿಡ ಮರದ ಕಡ್ಡಿ
ಕಾಲ ಜಾಲ ಪರೆ ಉಗುರಿಗೆ ಆಸರೆ
ಬಿದ್ದೇನೆಂಬ ಭುಗಿಲ ತೂಕಡಿಕೆಯ ಮಂಪರಿನಲ್ಲೆ ನಿದ್ದೆ
ದಿನವೆಲ್ಲ ದುಡಿದು ಬಸವಳಿದು ಬಸಿರು ತುಂಬಿದ ಉಸಿರಿನಲ್ಲೆ
ಗೂಡು ಸೇರುವೆ ಜೀವ ನೆಲ ಮುಗಿಲ ಬಂಧನದ
ಬಂದಿಯಲ್ಲಿ ಲೀನವಾದ ಸೂರ್ಯ ಸಂಜೆಯಾಯಿತು ಬದುಕಿಗೆ
ಕಪ್ಪಲಾಯಿತು ದಿನಕೆ ಸುಗ್ಗಿ ಉದಯದಾದೀತೆಂಬ
ನಿರೀಕ್ಷೆಯಲ್ಲೆ ನಿದ್ದೆ.

## ದಾರಿ ಬದಲಿಸುತ್ತೇವೆ

ನಾವು ನಿತ್ಯ ಅಂಗಿಗಳನ್ನು ಬದಲಿಸುತ್ತೇವೆ
ಮುಂದುವರೆದು ಬೇಕಾದರೆ
ಅಂಗಾಂಗಗಳನ್ನು ಬದಲಿಸುತ್ತೇವೆ.

ಮನೆಗಳನ್ನು ಬದಲಿಸುತ್ತೇವೆ
ಸಮಯ ಸಮಯಕ್ಕೆ ಮುಖಗಳನ್ನು ಬದಲಿಸುತ್ತೇವೆ
ಪ್ರಸಂಗ ಬಂದೊದಗಿದಾಗ
ಊರುಗಳನ್ನು ಬದಲಿಸುತ್ತೇವೆ
ಸ್ವಾರ್ಥಕ್ಕಾಗಿ ಬೇಕು ಬೇಕಾದರೂ ಬದಲಿಸುತ್ತೇವೆ.

ಗುರುಗಳನ್ನು ಬದಲಿಸುತ್ತೇವೆ
ವಿಶ್ವಾಸದ ಗೆಳೆಯರನ್ನು ಬದಲಿಸುತ್ತೇವೆ
ಮೋಜಿಗಾಗಿ ಗಾಜಿನ ಕೊಳವೆಗಾಗಿ
ಮಡದಿಯನ್ನು ಸಹ ಬದಲಿಸುತ್ತೇವೆ.

ಸಿಗದ ಸುಖದ ಸೌಕರ್ಯಕ್ಕಾಗಿ
ಧನದ ದುರಾಶೆಯಿಂದಾಗಿ
ಧರ್ಮ ಬದಲಿಸುತ್ತೇವೆ
ದೇಶ ಬೇಕಾದರೂ ಬದಲಿಸುತ್ತೇವೆ
ಹೊತ್ತುಹೊತ್ತಿಗೆ ನೀತಿಯನ್ನು ಬದಲಿಸುತ್ತೇವೆ

ಭೋಗಕೆಲ್ಲಿದೆ ಪ್ರಾಯ
ಆತ್ಮಕೆಲ್ಲಿದೆ ಕಾಯ
ಕೊನೆಗೆ ದೇಹ ಬಿಡುವ ಸ್ಥಿತಿ ಬಂದಾಗ
ಬದಲಿಸಲು ಬೇರೊಂದು ದೇಹ ಸಿಗದಾಗ
ದಾರಿ ಬದಲಿಸುತ್ತೇವೆ.

ಸ್ವಾರ್ಥದ ನರಕದಲಿ ಜೀವಿಸಿ
ಸತ್ತು ಸ್ವರ್ಗ ಸಿಗುವ ಮಹಾದಾಸೆಯಿಂದ
ತಡಕಾಡಿ ಕಣ್ಣು ಮುಚ್ಚುವಾಗ
ತಡವಾಗಿ ಧ್ಯೇಯ ಬದಲಿಸುತ್ತೇವೆ

● ಸಿದ್ಧರಾಮ ಹೊನ್ಕಲ್

## ಶಹಾಪೂರ ತೆರೆದುಕೊಳ್ಳುವದೇ ಹೀಗೆ...

ನಗರ ನಾಡಿನ
ಈ ಶಹಾಪೂರ
ತೆರೆದುಕೊಳ್ಳುವದೆ ಹೀಗೆ....

ಕೋಳೂರ ಅಗಸಿಯಲ್ಲಿ
ಕೂಗುವ ಕೋಳಿಯ ಕೂಗು
ದಿಗ್ಗಿ ಅಗಸಿಯ ಬೆಟ್ಟದಲ್ಲಿ
ಬೇಸತ್ತು ಮಲಗಿದಂತಿರುವ
ಬುದ್ಧನಿಗೂ ಕ್ಷಣ ಗುದ್ದಿ ಎಬ್ಬಿಸುತ್ತದೆ.

ನಿದ್ದೆಗಣ್ಣಿನಲ್ಲಿ ಸೆರಗು ಜಾರಿದ
ತುಂಬು ಜವ್ವನೆಯಂತೆ ಮಲಗಿರುವ
ಶಹಾಪೂರ ಭೀಗುಡಿ ರಸ್ತೆಯೆಂಬ ತರುಣಿಗೆ
ಮೃದುವಾಗಿ ಮುತ್ತಿಟ್ಟು ಸಾಗುವ ಪ್ರೇಮಿಯಂತೆ
ನಸು ಬೆಳಗಿನಲ್ಲಿ ಸೈಕಲ್ ತುಳಿಯುತ್ತ ಬರುವ
ದಿನ ಪತ್ರಿಕೆಯ ಹುಡುಗ
ಮನೆ ಮನೆಯ ಕಿಟಕಿಗೂ ತೂರಿ ಬಿಟ್ಟು
ಬೆಳಗಾಯಿ–ತಿನ್ನಾದರೂ ಏಳಿ ಎಂದು
ಎಚ್ಚರಿಸುತ್ತ ಮುಂದೆ ಸಾಗುತ್ತಾನೆ

ಕೃಷ್ಣೆಯ ನೀರು ಹರಿದು ಬಂದ
ಈ ನೆಲದಲ್ಲಿ ಈಗ ಕೃತಕ ಉತ್ಸಾಹವೋ ಉತ್ಸಾಹ
ಬೆಳ್ಳಿಗೂದಲಿನ ಮುದುಕರೂ ಸಹ
ಹೊಸ ಹರೆಯ ಬಂದವರಂತೆ
ಕೂದಲಿಗೆ ಕಪ್ಪು ಸವರಿ
ಮೇಲೆ
ಸೇಂಟು ಸಿಂಪಡಿಸಿಕೊಂಡು
ಬೆಳಗ್ಗೆ ಬೀದಿಗಿಳಿಯುತ್ತಾರೆ

ಬಾನ ಕೊಡುವ ತುಂಡು ಭೂಮಿಯನು
ಕಳೆದುಕೊಂಡ ಇಲ್ಲಿಯ ಬಡ ರೈತನ ಮಗ
ದಿನಗೂಲಿಯವನಾಗಿ ಅಧಿಕಾರಿಗಳ 'ನಾಯಿ' ಕಾಯುತ್ತಾನೆ
ಅಥವಾ
ಭ್ರಮೆ ಹೊತ್ತ ಮೈಮನಗಳಿಂದ
ಸುಡು ಸುಡು ಬಿಸಿಲಲ್ಲಿ ಪುಢಾರಿಗಳ
ಬಾಗಿಲು ಕಾಯುತ್ತಾನೆ

ವಿಶ್ವ ಬ್ಯಾಂಕಿನಿಂದ ಹರಿದು ಬಂದ ಹಣ
ಅಧಿಕಾರಿ–ಪುಢಾರಿಗಳಿಗೆ ಬೈಕು–ಕಾರು ಬಂಗಲೆಗಳಾಗಿ
ಕಟ್ಟಿದ ಡ್ಯಾಮು ಸಡಿಲಿ
ಇಲ್ಲಿಯ ರೈತ ದುಗುಡದಿಂದ
ಕ್ಷಣ ಮುಗಿಲು ನೋಡುತ್ತಾನೆ;
ಕ್ಷಣ ಜೀಪು–ಕಾರುಗಳ
ಹಾರ–ತುರಾಯಿ ಭಾಷಣಗಳ ಭರಾಟೆ ಕಂಡು
ಬೆಕ್ಕಸ ಬೆರಗಾಗಿ
ಹೊಟ್ಟೆಯ ಹಸಿವು ಮರೆತು
ಕಂಟ್ರಿ ಕುಡಿದು ಕಳೆದು ಹೋಗುತ್ತಾನೆ

ಮುಂಗೈ ಬಲದವನು
ಇಲ್ಲಿ ಅಧಿಕಾರಿಗಳ ಕಾಲರ್ ಹಿಡಿದೋ:
ಎಂಜಲು ಚೆಲ್ಲಿ ಗುತ್ತಿಗೆ ಪಡೆದು
–ಇಲ್ಲದ ರಸ್ತೆಗಳ ರಿಪೇರಿಗಾಗಿ
ಬಿಲ್ಲು ಪಡೆಯುತ್ತಾನೆ

ಇಲ್ಲಿಯ
ಪುಢಾರಿ–ಹೋರಾಟಗಾರ–ಪತ್ರಿಕಾ ಶೂರ
ಸಮಾಜವಾದಿಗಳೆಲ್ಲಾ
ಸ್ವಮಜಾವಾದಿಗಳಾಗಿ
ಪತ್ರಿಕಾ ಪುಟಗಳಲ್ಲೆ ಸ್ಖಲನಗೊಳ್ಳುತ್ತಾರೆ

ಪಂಪ ನೇರವಾಗಿ ಅರಿಕೇಸರಿಯನ್ನು ಅರ್ಜುನನೊಂದಿಗೆ "ತಗುಳ್ಚಿ" ಹೇಳುತ್ತೇನೆ ಎಂದು ಸ್ಪಷ್ಟಪಡಿಸುವಾಗ ಅದರ ಬಗ್ಗೆ ಅನವಶ್ಯಕ ತೊಡಕುಗಳು ಏಳುವುದಿಲ್ಲ. ಆದರೆ ಹೀಗೆ ಸ್ಪಷ್ಟಪಡಿಸದೆಯೇ ಅಲ್ಲಲ್ಲಿ ಎದ್ದು ಬರುವ ಅನುಭವದ ಅಭಿವ್ಯಕ್ತಿ ತೊಡಕು ತರುತ್ತದೆ ಎನ್ನುವುದು ಒಪ್ಪಿಕೊಳ್ಳಬೇಕಾಗುದದೇ ಆಗಿದೆ. ಈ ರೀತಿಯ ಅಭಿವ್ಯಕ್ತಿಗೆ ಪಾತ್ರಗಳ ಸ್ವತಂತ್ರ ಚಲನೆಯೇ ಅಧಿಕತವಾಗಿ ಕಾರಣವಾಗಿರುತ್ತದೆ. ಆದ್ದರಿಂದ ಅರ್ಥೈಸುವಿಕೆಯಿಂದ ಜಾರಿ ಕೊಳ್ಳುವ ಪ್ರವೃತ್ತಿ ಎನಿಸಿದರೂ, ವಾಸ್ತವ ಲೋಕದ ಅನುಭವದ ಅಭಿವ್ಯಕ್ತಿ ಯಾವುದೇ ಪಾತ್ರದಲ್ಲಿ ಹೊಕ್ಕು ಹೊರಬರಬಹುದು. ವರ್ಣ ಮತ್ತು ಜಾತಿಯಂತಹ ವಿಷಯದ ಬಗ್ಗೆ ಚರ್ಚಿಸುವಾಗ ಪಂಪನ ಕಾವ್ಯ-ದಲ್ಲಿಯ ಯಾವುದಾದರೊಂದು ಪಾತ್ರ ಅಥವಾ ಸಂದರ್ಭ ಎತ್ತಿಕೊಂಡು, ಪಂಪನ ನಿಲುವನ್ನು ನಿರ್ಧರಿಸಲಾಗದು. ಇಂಥ ನಿಲುವುಗಳ ಶೋಧಕ್ಕೆ ಎಲ್ಲ ಪಾತ್ರಗಳೊಂದಿಗೆ ವ್ಯಕ್ತವಾದ ವರ್ಣ ಮತ್ತು ಜಾತಿ ವಿಚಾರಗಳನ್ನು ಒಟ್ಟಾಗಿ ಗ್ರಹಿಸಿ ಅರ್ಥೈಸಿ-ದಾಗಲೇ ಅದಕ್ಕೆ ಅರ್ಥವಿರುತ್ತದೆ. ಹೀಗಾಗಿ ಜಾತಿ ಮತ್ತು ವರ್ಣಗಳ ನೆಲೆಯಲ್ಲಿ ಜಿಜ್ಞಾಸೆಗೆ ತೊಡಗಿದಾಗ ಯಾವ ಪಾತ್ರವೂ ಗಣ್ಯವಲ್ಲ ಯಾವ ಪಾತ್ರವೂ ನಗಣ್ಯವಲ್ಲ.

ಈ ಮೊದಲೇ ವರ್ಣ ವ್ಯವಸ್ಥೆಯ ಕುರಿತ ಪಂಪನ ಸಂಪೂರ್ಣ ಸಮ್ಮತಿ-ಯುಳ್ಳ ವಿಚಾರಗಳನ್ನು ಗಮನಿಸಿದ್ದೇವೆ. ಕುಲವನ್ನು ಸಾಂದರ್ಭಿಕವಾಗಿ ಮತ್ತು ನಿಷ್ಠುರವಾಗಿ ಮಾತಿನಲ್ಲಿಯೇ ಅಲ್ಲಗಳೆಯುವ ಬಗೆಯನ್ನೂ ಗಮನಿಸಿದ್ದೇವೆ. ಅಲ್ಲಿ ವ್ಯಕ್ತವಾದಂತೆ ಹಾಗು ಇಲ್ಲಿಯ ಕರ್ಣನ ಮಾತುಗಳು ಅಥವಾ ಕರ್ಣನ ಮೂಲಕ ಆಡಿದ ಪಂಪನ ಮಾತುಗಳು ಕೇವಲ ಪ್ರಾಸಂಗಿಕವಾಗಿ ಆಡಿದ ಮಾತುಗಳಾಗಿವೆ ಎಂದು ಮೇಲು ನೋಟಕ್ಕೆ ತೋರುತ್ತದೆ.

'ತಕ್ಕನಂ ಪೊಲೆಯನೆ ಮಾಳ್ಪ ಮುಂ ಪೊಲೆಯನಂ
ನೆಟ್ಟು ತಕ್ಕನೆ ಮಾಳ್ಪ—(12–92)[1]

---

1. ಕಲಿಯನೆ ಪಂದೆ ಮಾಳ್ಪ ಕುಡುವಂದೆಯನೊಳ್ಗಲಿ ಮಾಳ್ಪ ತಕ್ಕನಂ ಪೊಲೆಯನೆ ಮಾಳ್ಪ ಮುಂ ಪೊಲೆಯನಂ ನೆಟ್ಟು ತಕ್ಕನೆ ಮಾಳ್ಪ ತಮ್ಮೊಳ ಗ್ಗಲಿಸಿ ಪೊದ್ದು ಪೆರ್ವಿದವಿವೇಕತೆಯಿಂ ನೃಪ ಚಿತ್ತವೃತ್ತಿ ಸಂ ಚಲಮುಱಂದಮೋಲಗಿಸಿ ಬಾಮ್ವಿದೆ ಕಷ್ಟಟುಳಾಧಿನಾಥರಂ—ಪಂಪ ಭಾರತಂ : 12–92

ಕರ್ಣನನ್ನೆ ಉದ್ದೇಶಿಸಿ ಶಲ್ಯನಿಂದ ಹೇಳಿಸುವ ಈ ಮಾತು ತುಂಬ ಗಂಭೀರವಾಗಿಯೇ ಪರಿಗಣಿಸಬೇಕು. "ಪೊಲೆಯ" ಎನ್ನುವ ಪದ ಗುಣವಾಚಕವಾಗಿ ಬಳಕೆಯಾಗಿದೆ ಎನಿಸಿದರೂ ಎರಡು ಬಾರಿ ಬಳಕೆಯಾಗುವ ಈ ಪದ ಎರಡನೆಯ ಬಾರಿಯಲ್ಲಿ ಕೇವಲ ಗುಣವಾಚಕ ಪದವಾಗಿ ಮಾತ್ರ ಬಳಕೆಯಾಗದೆ ಅದು ಕರ್ಣನನ್ನೇ ಉದ್ದೇಶಿಸಿ ಬಳಸುವುದರಿಂದ ಹೀನಕುಲದವನೆಂದೇ ದಾಖಲಾಗುವ ಕರ್ಣನಿಗೆ ಜಾತಿವಾಚಕವಾಗಿಯೂ ಬಳಕೆಯಾಗುತ್ತದೆ. ಇಷ್ಟೇ ಏಕೆ ನನ್ನಂತೆ ಸಾರಥಿಯಾಗಿ ಎದುರಿಗೆ ಕೃಷ್ಣನಿರಲು ಪುತ್ಸ್ಯಂದನ ಚೋದನ ಕ್ರಮದುದುಂ. ಪೊಲೆಯಂಗಂಆಮರ್ದಿರ್ಕುಂ (೧೨--೯೪) (ರಥವನ್ನು ಹಾರಿಸುವ ರೀತಿ ಅದೂ ಹೊಲೆಯನಿಗೆ ಒಪ್ಪಾಗಿರುತ್ತದೆ) ಎಂದು ಹೇಳುತ್ತ ಕರ್ಣನಿಗೆ ನೇರ ಹೊಲೆಯನೆಂದೇ ಕರೆಯಲಾಗಿದೆ. ಕರ್ಣ ಬೆಸ್ತರ ಜಾತಿಗೆ ಸೇರಿದವನೇ ವಿನ ಹೊಲೆಯರ ಜಾತಿಗೆ ಅಲ್ಲ. ಆದರೆ ಹಿರಿಯ ಕುಲದವರು ಕೀಳು ಕುಲಗಳಲ್ಲಿಯೇ ಇರುವ ಒಳ ಜಾತಿ ಭೇದಕ್ಕೆ ಮಹತ್ವಕೊಡದೆ ಒಟ್ಟಾರೆಯಾಗಿ ಹೊಲೆಯರೆಂದೇ ಕರೆಯುತ್ತಿರುವುದೂ ಇಲ್ಲಿ ದಾಖಲಾಗಿದೆ. ಇವತ್ತಿನ ಸಂದರ್ಭಗಳಲ್ಲಿಯೂ ಹಿರಿಯ ಕುಲದವರು ಕೀಳುಕುಲದಲ್ಲಿ ಇರುವ ಒಳಭೇದಕ್ಕೆ ಮಹತ್ವಕೊಡದೆ ಹೊಲೆ-ಮಾದಿಗರೆಂದು ಕರೆಯುವುದು ವಾಡಿಕೆಯಾಗಿರುವುದನ್ನು ಗಮನಿಸಬೇಕು.

ಹೀಗೆ ಕಾವ್ಯಗಳ ಹಲವಾರು ಕಡೆಗಳಲ್ಲಿ ಜಾತಿಯನ್ನು ಸಮರ್ಥಿಸುವ ಮತ್ತು ಅದನ್ನೇ ನೆಚ್ಚಿಸಿಕೊಂಡು ಕೃತಿಯಲ್ಲಿ ಕ್ರಿಯಾತ್ಮಕವಾಗಿ ಬೆಳಸಿಕೊಂಡು ಹೋಗುವುದರಿಂದ ಜಾತಿಯ ಕುರಿತು ಪಂಪ ಆಡಿಸಿದ ಪ್ರತಿಭಟನೆಯ ಮಾತುಗಳಿಗೆ ಯಾವುದೇ ತಾತ್ವಿಕ ನೆಲೆಗಟ್ಟು ಇಲ್ಲ ಎನ್ನುವುದು ತುಂಬ ಸ್ಪಷ್ಟವಾಗಿದೆ. ಆದರೆ ಅಷ್ಟೇ ಸಲೀಸಾಗಿ ಇವು ಕೇವಲ ಪ್ರಾಸಂಗಿಕವಾದ ಮಾತುಗಳೆಂದು ತಳ್ಳಿ ಹಾಕಿಬಿಡುವುದು ಸುಲಭಸಾಧ್ಯವಲ್ಲ ಎಂದು ಬಗೆದು ಈ ಹಿನ್ನೆಲೆಯಲ್ಲಿ ಹುಟ್ಟುವ ಕೆಲವು ವಿವಾದಾತ್ಮಕ ಪ್ರಶ್ನೆಗಳನ್ನು ಎತ್ತಿ ಚರ್ಚಿಸಬಹುದು.

---

೧. ಶಲ್ಯ-ದುರ್ಯೋಧನರ ಸಂವಾದದ ಕುರಿತು ಡಿ. ಎಲ್. ನರಸಿಂಹಾಚಾರ ಅವರು ಬರೆಯುತ್ತ - ಶಲ್ಯನ ಬಾಯಲ್ಲಿ ಬರುವ ರಾಜ ಗುಣಾವಗಳ ನಿರೂಪಣೆ ಪಂಪನಿಂದ ನಿಯೋಜಿತವಾದುದು. ಈ ಪದ್ಯಗಳನ್ನು ಅವನು ಅರಿಕೇಸರಿಯ ಮುಂದೆ ಓದಿದಾಗ ಆ ರಾಜ ನಿಜವಾಗಿಯೂ ಚಕಿತನಾಗಿರಬೇಕು ಎಂದು ಹೇಳುವ ಈ ಮಾತುಗಳು ಗಮನಾರ್ಹವಾದುವು ಪಂಪಭಾರತ ದೀಪಿಕೆ : ೪೭೦

ಪಂಪ ತನ್ನ ಕಾವ್ಯಗಳಲ್ಲಿ ವರ್ಣ ವ್ಯವಸ್ಥೆಗೆ ಪ್ರತಿಭಟಿಸದೆ ಒಪ್ಪಿಕೊಳ್ಳುವುದು ಹಾಗು ವ್ರತಗಳನ್ನಾಚರಿಸುವ ಬ್ರಾಹ್ಮಣರನ್ನು ಹೊರತುಪಡಿಸಿ ಇನ್ನುಳಿದವರನ್ನೆಲ್ಲ "ಮನುಷ್ಯ ಜಾತಿ ತಾನೊಂದೆವಲಂ" ಎಂದು ಹೇಳುವುದು ಯಾಕಾಗಿ? ಹಾಗೆಯೇ ಜಾತಿಯೊಳೆಲ್ಲ ಉತ್ತಮ ಜಾತಿ ಬ್ರಾಹ್ಮಣ ಜಾತಿ (ಕುಲ) ಎಂದು ಹೇಳುತ್ತ ಮತ್ತೆ "ಕುಲಂ ಕುಲಮಲ್ತು ಚಲಂ ಕುಲಂ ಗುಣಂ ಕುಲಂ... ...." ಎಂದು ಪ್ರತಿಭಟಿಸುವುದು ಯಾಕಾಗಿ? ಈ ಬಗೆಯ ಪ್ರಗತಿಪರ ಧೋರಣೆಯನ್ನು ತಾಳುವುದೇಕೆ? ಅಥವಾ ಈ ಗುಣ ಪಂಪನಲ್ಲಿ ಬಂದದ್ದು ಹೇಗೆ? ಎನ್ನುವ ಪ್ರಶ್ನೆಗಳೇಳುವುದು ಸಹಜ.

ಜಾತಿಯೊಳೆಲ್ಲಮುತ್ತಮದ ಜಾತಿಯ ವಿಪ್ರ ಕುಲಂಗಳ್ ಅಂತವೇ
ಮಾತೋ ಜಿನೇಂದ್ರ ಧರ್ಮಮೆ ವಲಂ ಮೂರೆ ಧರ್ಮದೊಳೆಂದು ನಂಬಿ
ಜಾತಿಯನುತ್ತರೋತ್ತಮ ಮಾಡಿ ನೆಗಳ್ದನಿಂತಿರಾತ್ತ ವಿ
ಖ್ಯಾತಿಯನಾತನಾತನ ಮಗಂ ನೆಗಳ ಕವಿತಾ ಗುಣಾರ್ಣವಂ (14-48)

ಈ ವೃತ್ತದಲ್ಲಿ ಬರುವ ಎರಡು ವಿಚಾರಗಳು ನಮ್ಮ ಮೇಲಿನ ಪ್ರಶ್ನೆಗಳಿಗೆ ಉತ್ತರ ಕಂಡು ಕೊಳ್ಳಲು ನೇರವಾಗಿ ಸಹಕರಿಸುತ್ತವೆ. "ಜಾತಿಗಳಲ್ಲೆಲ್ಲ ಉತ್ತಮವಾದ ಜಾತಿ ಬ್ರಾಹ್ಮಣ ಜಾತಿ" ಎಂದು ದೊರೆಯುವ ಭಾವಾರ್ಥ. ಹಾಗೆಯೆ 'ಧರ್ಮಗಳಲ್ಲಿ ಮಿಗಿಲಾದದ್ದು ಜೈನಧರ್ಮವೇ ಎನ್ನುವುದು ಇನ್ನೊಂದು ಭಾವಾರ್ಥವಿರುವುದು ಸ್ಪಷ್ಟವಾಗಿದೆ. ಇಲ್ಲಿ ಪಂಪ "ವಿಪ್ರಕುಲ" "ಜಿನೇಂದ್ರ ಧರ್ಮ" ಎಂದು ಎರಡು ಬೇರೆ ಬೇರೆಯಾಗಿ ವರ್ಗೀಕರಿಸುತ್ತಾನೆ. ಎಂದರೆ "ಬ್ರಾಹ್ಮಣಕುಲ" ಎಂಬುದಾಗಿ ಹೇಳುತ್ತಿದ್ದಾನೆಯೇ ವಿನಃ 'ಬ್ರಾಹ್ಮಣಧರ್ಮ'ವೆಂದು ಹೇಳುತ್ತಿಲ್ಲ ಎನ್ನುವುದನ್ನು ಗಮನಿಸಬೇಕು. ಇವು ಎರಡರಲ್ಲಿ ಯಾವುದು "ದೊರೆ" ಎನ್ನುವುದನ್ನು ಮತ್ತೆ ಬಿಡಿಸಿ ಹೇಳಬೇಕಿಲ್ಲ. ಹೀಗೆ ಎರಡನ್ನು ಸೀಳಿ ಸಮಾನ ರೇಖೆಯ ಮೇಲೆ ನಿಲ್ಲಿಸದಿರಲು ಕಾರಣವೇನು?

ಪಂಪ ಈಗ ಜೈನನಾಗಿದ್ದು, ಹಿಂದೆ ಬ್ರಾಹ್ಮಣನಾಗಿದ್ದದ್ದು ಕಾರಣವೆಂದು ತಕ್ಷಣವೇ ಹೇಳಿ ಬಿಡಬಹುದು. ಇದನ್ನು ಈಗಾಗಲೇ ಹೆಚ್ಚಿನ ವಿದ್ವಾಂಸರು ಗುರುತಿಸಿದ್ದಾರೆ. ಇನ್ನು ಕೆಲವರು "ಜೈನನಾದ ತಾನು ಜೈನನಲ್ಲದ ರಾಜ, ಉಭಯ-ಬಸ್ತಿಗೆ ಒಳಗಾಗಿ, ಅವನ ಕಾವ್ಯ ಪ್ರಜ್ಞೆ ಗಂಡಭೇರುಂಡದಂತೆ ದ್ವಿಮುಖವಾಯಿತು" ಎಂದೂ ಗುರುತಿಸಿದ್ದಾರೆ. ಈ ವೃತ್ತದ ಹಿಂಜುವಿಕೆ ಇಲ್ಲಿಗೆ ನಿಲ್ಲಿಸಿದರೆ ಸಾಲದು ಎನಿಸುತ್ತದೆ. ಪಂಪ ಅರಿಕೇಸರಿಯನ್ನು ಮುಂದು ಮಾಡಿಕೊಂಡು ನಾರಾಯಣ, ಶಿವ,

ಮನ್ಮಥ, ಗಣೇಶರ ಅಸ್ತಿತ್ವವನ್ನು ಬುಡ ಮೇಲು ಮಾಡುವಂತಹ ವಿಚಾರ ಕಾವ್ಯದ ಆರಂಭದಲ್ಲಿಯೇ ಗಮನಿಸುತ್ತೇವೆ.[1] ವಿಮರ್ಶಕರು ಮಹಾಭಾರತದ ಬಗ್ಗೆ ವೈದಿಕ ಮತಾನುಯಾಯಿಗಳಾಗಿರುವಂತಹ ಧಾರ್ಮಿಕ ಶ್ರದ್ಧೆ ಇಲ್ಲದಿರುವುದರಿಂದ ಕೇವಲ ಲೌಕಿಕ ಭಾವನೆಯಿಂದಷ್ಟೇ ನೋಡುತ್ತಾನೆ.[2] ಎಂದು ಗುರುತಿಸಿದ್ದಾರೆ. ಹಾಗೆಯೇ ತನಗಿಂತ ಎಷ್ಟೋ ಹಿಂದೆಯೇ ವೈದಿಕ ಮತಾನುಯಾಯಿಗಳಾದ ಭಾರವಿ, ಮಾಘ, ಭದ್ರಿ ನಾರಾಯಣ ಮೊದಲಾದ ಕವಿಗಳು ಹಲವಾರು ಮಾರ್ಪಾಡುಗಳನ್ನು ಮಾಡಿ ಕೊಂಡಿರುವಾಗ ಪಂಪ ಹಿಂಜರಿಯಬೇಕಾದುದಿರಲಿಲ್ಲ.[3] ಎಂದೂ ಹೇಳಿದ್ದಾರೆ. ಪಂಪ ವೈದಿಕ ಭಾರತವನ್ನು ಮಾರ್ಪಡು ಮಾಡಿಕೊಳ್ಳುತ್ತಿದ್ದರಿಂದ ಮಾತ್ರ ಹೆದರುತ್ತಿಲ್ಲ. ಬದಲಾಗಿ ಅಂದಿನ ಸಾಂಸ್ಕೃತಿಕ ಸಂಘರ್ಷವನ್ನು ಎದುರಿಸಲು ಸಿದ್ಧತೆಗಳನ್ನು ಮಾಡಿ ಕೊಳ್ಳುತ್ತಿದ್ದಾನೆ. ಹೀಗಾಗಿಯೇ ಸಾಮಂತ ಅರಸನಾದ ಅರಿಕೇಸರಿಯನ್ನು ನಾರಾ-ಯಣನಿಗಿಂತ ಉತ್ತಮನೆಂದು ಸಾರಿ ಬಿಡುತ್ತಾನೆ. ತಾನೂ ಬ್ರಾಹ್ಮಣನೆಂಬುದನ್ನು ಅಲ್ಲಲ್ಲಿ ಪರೋಕ್ಷವಾಗಿ ತೋರಿಸಿಕೊಳ್ಳುವ ಪಂಪನಲ್ಲಿಯ ಗುಣ, ಅವತ್ತಿನ ಸಾಂಸ್ಕೃತಿಕ ಸಂಘರ್ಷದ ಸ್ಥಿತಿಗತಿಗಳನ್ನು ಹೇಳುತ್ತವೆ. ಮತ್ತು ಈ ಸಂಘರ್ಷದಲ್ಲಿ ಬ್ರಾಹ್ಮಣರು ಪ್ರಬಲರಾಗಿದ್ದರೆಂದು ಹೇಳಬಹುದು. ಹೀಗಾಗಿ ಪಂಪ ಒಳಗೊಳಗೇ ಅವರೊಂದಿಗೆ ಶೀತಲಸಮರವನ್ನು ಮಾಡುತ್ತ, ಇಳಾದನಾಥರಂ ಜಲಗಿಸಿ ಬಾಮ್ಬಿರ ಕಷ್ಟಂ ಎನ್ನುವುದರ ಜೊತೆ ಜೊತೆಗೆ "ವ್ರತಾನಾಂ ಉತ್ತಮ ವ್ರತಂ" ಎಂಬ ಧೋರಣೆಯಿಂದ ಪಂಪ ಬ್ರಾಹ್ಮಣರನ್ನು ಓಲೈಸುವ ಕೆಲಸವನ್ನೂ ಮಾಡುತ್ತಿದ್ದಾನೆ. ಆದ್ದರಿಂದಲೇ ಪಂಪ ದ್ವಿಜರಲ್ಲಿ "ಬ್ರತಮಿಲ್ಲದವರ ಮತ್ತು ದೃಢವ್ರತರ" ಎಂದು ವರ್ಗೀಕರಿಸಿ ಬ್ರತಮಿಲ್ಲದವರನ್ನು ಮನುಷ್ಯ "ಜಾತಿಯಲ್ಲಯೂ" ದೃಢವ್ರತರನ್ನು ದೇವಕುಲದಲ್ಲಿಯೂ ಸೇರಿಸುತ್ತಾನೆ. ಹೀಗಾಗಿ ತನ್ನ ಲೌಕಿಕ ಕಾವ್ಯದಲ್ಲಿ ದೃಢವ್ರತ-ರಾದ ದ್ವಿಜರನ್ನು ಓಲೈಸುತ್ತ ಬ್ರಹ್ಮಣ್ಯತ್ವವನ್ನು ಪ್ರತಿಷ್ಠಾಪಿಸಿದರೆ ಬ್ರತಮಿಲ್ಲದ. ವರೊಂದಿಗೆ ಶೀತಲ ಸಮರಕ್ಕಿಳಿಯುತ್ತಾನೆ, ಇಂಥ ಸಾಂಸ್ಕೃತಿಕ ಸಂಘರ್ಷವಲ್ಲಿ ಇರುವದರಿಂದ ಪಂಪನು ತಕ್ಕಡೆಯ ಎರಡು ಪೊರಟೆಗಳಲ್ಲಿ ತನ್ನೆರಡು ಕಾಲು-ಗಳನ್ನಿಟ್ಟು ಎತ್ತಲು ಪ್ರಯತ್ನಿಸುವವರಂತೆ ಕಾಣುತ್ತಾನೆ,

---

1) ಪಂಪ ಭಾರತಂ. ; 12, 1—4· 1—7
2) ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ — ಸಂ. 2—70
3) ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ — ಸಂ· 2—70

ಇಷ್ಟೆಲ್ಲವು ಸ್ಪಷ್ಟವಾದ ಮೇಲೆ, ಪಂಪ ತನ್ನ ತಿರುಳು ಉತ್ತಮೋತ್ತಮ ಮಾಡಿ ಅಷ್ಟೊಂದು ಕಠೋರವಾಗಿ ಜಾತಿಯನ್ನು ವಿರೋಧಿಸಲು ಕಾರಣವನ್ನು ಸುಲಭವಾಗಿ ಹೇಳಬಹುದು. ಜೈನ ಧರ್ಮೀಯನಾದ ಪಂಪ ವೈದಿಕ ಧರ್ಮದೊಂದಿಗೆ ಸ್ಪರ್ಧಿಸುತ್ತ ಸಾಕಷ್ಟು ನೋವುಂಡ ಕವಿ. ಕರ್ಣ ಅಸ್ಪೃಶ್ಯನೆನಿಸಿಕೊಂಡು ಸ್ವಧರ್ಮೀ-ಯರಲ್ಲಿಯೇ ಅನ್ಯವರ್ಣಗಳಿಂದ ನೋವನ್ನು ಅನುಭವಿಸಿದಂತೆ, ಪಂಪನು ಅನ್ಯ ಧರ್ಮೀಯರಿಂದ ನೋವನ್ನು ಅನುಭವಿಸಿದ್ದಾನೆ. ಈ ಇಬ್ಬರೂ ಅನುಭವಿಸಿದ ನೋವಿನ ಬಗೆಯಲ್ಲಿ ಅಂತರಗಳಿದ್ದಾಗಲೂ ಈ ಅನುಭವಗಳು ಸಂಪೂರ್ಣ ಭಿನ್ನ-ವಾದ ಅನುಭವಗಳೇನಲ್ಲ. ಅದರಲ್ಲೂ ಈ ನೋವನ್ನು ಅನುಭವಿಸುವ ಮನಸ್ಸು ಒಂದೇ ಎನ್ನುವುದು ಲಕ್ಷಿಸಬೇಕು. ಕಾವ್ಯದಲ್ಲಿ ಪಂಪನೇ ಕರ್ಣನಾಗಿ ಎದ್ದು ನಿಲ್ಲುವ ಪ್ರಸಂಗಗಳೇ ಹೆಚ್ಚು. ಅರಿಕೇಸರಿಯ ಗುಣಗಳೆಲ್ಲ ಅರ್ಜುನನಿಗೆ "ತಗುಳ್ದ"ಂತೆ ತನ್ನ ಗುಣಗಳನ್ನೆಲ್ಲ ಪಂಪ ಕರ್ಣನಿಗೆ "ತಗುಳ್ಚಿ" ಹೇಳಿದಂತಿದೆ. ಇದರಿಂದಾಗಿಯೇ ದುರ್ಯೋಧನನ ಪಾತ್ರವೂ ಉದಾತ್ತೀಕರಣಗೊಳ್ಳಲು ಕಾರಣವಾಗಿದೆ. ಹೀಗಾಗಿ ಪಂಪ ಜಾತಿಯನ್ನು ಇಷ್ಟೊಂದು ನೇರವಾಗಿ ಮತ್ತು ಕಠೋರವಾಗಿ ಅಲ್ಲಲ್ಲಿ ಅಲ್ಲ-ಗಳೆಯುವಂತಾಗಿದೆ. ಹಾಗೂ ಕರ್ಣ "ವಿಕ್ರಮಾರ್ಜುನ ವಿಜಯ"ದಲ್ಲಿ ಕರ್ಣನೊಳಾರ್-ದೊರೆ ಎನಿಸಿಕೊಳ್ಳುತ್ತ—

"ನೆನೆಯದಿರಣ್ಣ ಭಾರತದೊಳಿಂ ಪೆರರಾರುಮನೊಂದೆ ಚಿತ್ತದಿಂ
ನೆನೆವೊಡೆ ಕರ್ಣನಂ ನೆನೆಯ"[1]

ಎಂದು ಹೇಳುವ ಮಟ್ಟಕ್ಕೇರುತ್ತಾನೆ. ಹೀಗೆ ಪಂಪ ತನ್ನತನವನ್ನು ಕರ್ಣನಿಗೆ ತುಂಬಿದ್ದರಿಂದ ಆತ ವಿರೋಧಿನಾಯಕನಾದರೂ ಧೀರಾಂತ ಪಾತ್ರವಾಗಿ ಮತ್ತು ದುರಂತ ಪಾತ್ರವಾಗಿ ಮೂಡಿಬರಲು ಸಾಧ್ಯವಾಗಿದೆ.

ಪಂಪ ಕರ್ಣನ ಜಾತಿಯ ಬಗ್ಗೆಯೇ ವಿಶೇಷವಾದ ಆಸಕ್ತಿಯನ್ನು ವಹಿಸು-ತ್ತಾನೆ. ಮಹಾಭಾರತ, ವಿಷ್ಣುಪುರಾಣಗಳಲ್ಲಿ ಇಲ್ಲದ ಜಾತಿಯ ವಿಚಾರವನ್ನು ಕೊಟ್ಟು ಆತ ಅಸ್ಪೃಶ್ಯ ಎನ್ನುವುದನ್ನು ಮತ್ತಷ್ಟು ಸ್ಪಷ್ಟಪಡಿಸುತ್ತಾನೆ! ಮಹಾ-ಭಾರತ ಮತ್ತು ವಿಷ್ಣುಪುರಾಣದ ಪ್ರಕಾರ ಕರ್ಣ "ಮೊಗುಲಿಗ"ನಲ್ಲ ಪಂಪಭಾರತದಲ್ಲಿ ಮಾತ್ರ ಕರ್ಣ ಮೀನುಗಳನ್ನು ಕೊಲ್ಲುವ ಅಂಬಿಗರ ಜಾತಿಯವನಾಗುತ್ತಾನೆ: (  ) ವಿಷ್ಣು ಪುರಾಣದ ಪ್ರಕಾರ—

---

1. ಪಂಪ ಭಾರತಂ—

'ಯಯಾತಿಯ ಪುತ್ರನಾದ ಅನುವಿನ ಸಂತತಿಗೆ ಸೇರುವ ಜಯದ್ರಥನೆಂಬುವನು ಬ್ರಾಹ್ಮಣ್ಯಾಂ ಕ್ಷತ್ರಿಯಾತ್ ಸೂತ ಎಂಬ ಸ್ಮೃತಿವಾಕ್ಯವನ್ನನುಸರಿಸಿ ಎಂಬ ಬ್ರಾಹ್ಮಣ ಸ್ತ್ರೀಯಲ್ಲಿ ಕ್ಷತ್ರಿಯನಿಂದ ಹುಟ್ಟಿದ ಸೂತರವಳೊಬ್ಬಳನ್ನು ಮದುವೆಯಾಗಿ ಅವಳಲ್ಲಿ ವಿಜಯನೆಂಬ ಪುತ್ರನನ್ನು ಪಡೆದನು. ಇವನು ಸೂತರ ಜಾತಿಯ ಸ್ತ್ರೀಯಲ್ಲಿ ಹುಟ್ಟಿದ ಕಾರಣ ಮುಂದೆ ಈ ಸಂತತಿಗೆ ಸೂತ ಸಂತತಿಯೆಂದೇ ಹೆಸರಾಯಿತು. ಆ ಸಂತತಿಯಲ್ಲಿ ಹುಟ್ಟಿದ ಅತಿರಥನೆಂಬುವನು, ಕುಂತಿಯು ಮರದ ಪೆಟ್ಟಿಗೆಯಲ್ಲಿಟ್ಟು ಗಂಗೆಯಲ್ಲಿ ತೇಲಿಸಿ ಕೂಸನ್ನು ಎತ್ತಿಕೊಂಡು ಹೋಗಿ ಸಾಕಿದನು ಎಂದು ಇದರಿಂದ ಆತನು ಅಂದರೆ ಕರ್ಣನು ಕ್ಷತ್ರಿಯನೇ ಹೊರತು ತನ್ನ ಸಾಕು ತಂದೆಯನ್ನನುಸರಿಸಿ ಸೂತರ ಜಾತಿಯವನು ಕೂಡ ಆಗಲಾರನು.[1]

ಈ ಮೇಲಿನ ಕರ್ಣನ ಕಥಾನಕದಲ್ಲಿ ಕರ್ಣ ಸಾಕು ತಂದೆಯನ್ನು ಅನುಸರಿಸಿದರೂ "ಕ್ಷತ್ರಿಯ" ಬ್ರಾಹ್ಮಣ ಎರಡೂ ವರ್ಣಗಳು ಗೋಚರವಾಗುತ್ತವೆ. (ಬ್ರಾಹ್ಮಣ ಕುಲದ ಸ್ತ್ರೀಯೊಬ್ಬಳಿದ್ದಾಗಲೂ ಆಕೆಯ ವಂಶದೊಂದಿಗೆ ಸಂತತಿ ಬೆಳೆಯದೆ ಸೂತ ಜಾತಿಯ ಸ್ತ್ರೀ ಬಂದಾಗ ಆಕೆಯ ಜಾತಿಗೆ ಅನುಗುಣವಾಗಿ ಸಂತತಿ ಬೆಳೆಯುತ್ತದೆ!) ಪಂಪನೂ ಜೈನನಾದರೂ ಬ್ರಾಹ್ಮಣ ಕುಲಕ್ಕೆ ಸಂಬಂಧಪಟ್ಟವನಾಗಿ ಕ್ಷತ್ರಿಯನಂತೆ ಯೋಧನೂ ಕೂಡ. ಈ ನೆಲೆಯಲ್ಲಿ ಕರ್ಣನಿಗೆ ಮತ್ತು ಪಂಪನಿಗೆ ತಳಕು ಹಾಕಿದರೂ ಕೇವಲ ಕುಲದ ನೆಲೆಯಲ್ಲಿ ಸಾಮಿಪ್ಯವಿದೆ, ಸಂಬಂಧಗಳ ಹಿನ್ನೆಲೆಯಲ್ಲಿ ಗಮನಿಸಿದರೆ ಅಪಾರ್ಥವೂ ಇದೆ. ಆದರೆ ಈ ವಿಚಾರಕ್ಕಿಂತ ಮುಖ್ಯವಾದುದು ಪಂಪ ಈ ಕಥೆಯನ್ನೇಕೆ ಗೌಣ ಮಾಡಿ, ಕರ್ಣನಿಗೆ 'ಮೊನಗುಲಿಗ'ನೆಂದು ಕೊಟ್ಟ? ಎನ್ನುವ ಪ್ರಶ್ನೆಗಳು ಏಳುತ್ತವೆ. ಪಂಪನಿಗೆ ಸಂಕ್ಷಿಪ್ತತೆಯೇ ಪ್ರಧಾನ ಎಂದು ಗ್ರಹಿಸಿ ಸ್ವೀಕರಿಸಿಬಿಡುವುದಾದರೆ, ಪಂಪ ಯಾವ ಬಗೆಯ ಉದ್ದೇಶದಿಂದ ಕರ್ಣನೊಂದಿಗೆ ನಂಟನ್ನು ಸಾಧಿಸಿದ್ದಾನೆ ಎನ್ನುವುದು ಮತ್ತು ಸ್ಪಷ್ಟವಾಗುತ್ತದೆ. ಇದರೊಂದಿಗೆ ಪಂಪ ಮಾಡಿದ, ಜಾತಿ ವ್ಯವಸ್ಥೆಯ ಸಾಂದರ್ಭಿಕ ಪ್ರತಿಭಟನೆಗೆ ಇನ್ನೂ ಹೆಚ್ಚಿನ ಅರ್ಥ ಬರುತ್ತದೆ.

ಪಂಪ ಜಾತಿಯ ನೆಲೆಯಲ್ಲಿಯೇ ನಿಂತು ಜಾತಿಯನ್ನು ಅರ್ಥೈಸಿಕೊಳ್ಳದೆ ಧರ್ಮದ ನೆಲೆಯಲ್ಲಿ ನಿಂತು ಜಾತಿಯನ್ನು ಅರ್ಥೈಸಿಕೊಂಡು "ಕುಲಂ ಕುಲಮಲ್ತು ...." ಎಂದು ಪ್ರತಿಭಟಿಸುತ್ತಾನೆ. ಹೀಗೆ ಪ್ರತಿಭಟಿಸಲು ಬ್ರಾಹ್ಮಣ ಕುಲ ಎನ್ನುವ

---

1. ಲೇ : ಐ. ಶಿವರಾಮಯ್ಯ : ಭಾರತದ ತುಲನಾತುಲನ ವಿಷಯಗಳು
   ಸಂ : ಕ. ಸಾ. ಪರಿಷತ್ತು : ರತ್ನಕವಿ ಪ್ರಶಸ್ತಿ—65

'ವರ್ಣ' ಹಾಗೂ ಜೈನ ಧರ್ಮೀಯರ ನಡುವೆ ನಡೆದ ಸಂಘರ್ಷವೇ ಕಾರಣವಾಗಿದೆಯೇ ವಿನಃ ಒಟ್ಟು ವರ್ಣ ವ್ಯವಸ್ಥೆಯು ಧರ್ಮದೊಂದಿಗಿನ ಸಂಘರ್ಷ ಅಲ್ಲ ಎನ್ನುವುದನ್ನು ಗಮನಿಸಬೇಕು. ಪಂಪ ಇಡೀ ಮಾನವ ಜಾತಿಯನ್ನು ಎರಡು ವರ್ಗವಾಗಿ ನೋಡುತ್ತಾನೆ. ಒಂದು ಭೂಮಂಡಲದ ದೇವತೆಗಳ ವರ್ಗ, ಮತ್ತೊಂದು ಮನುಷ್ಯ ವರ್ಗ ಎಂದರೆ ಜಾತಿಯಲ್ಲಿ ಉತ್ತಮ ಜಾತಿಯವರಾದ ಬ್ರಾಹ್ಮಣರೆಂಬ ದೇವತೆಗಳ ವರ್ಗ, ಮತ್ತೊಂದು ಕ್ಷತ್ರಿಯ, ವೈಶ್ಯ, ಶೂದ್ರರಿಂದ ಕೂಡಿದ ವರ್ಣ ಸಂಕರವಾಗಲೀಯದೆ ತಮ್ಮ ತಮ್ಮ ಜಾತಿಗಳೊಳ್ ನಿಲ್ವುದುಂ ಕೊಳ್ಕೊಡೆಯುಮಂ ನಿಯೋಜಿಸಿದ ಮನುಷ್ಯ ವರ್ಗ ಎಂದು ಬಗೆದು ನೋಡುತ್ತಾನೆ. ಆದಿಪುರಾಣವನ್ನು ಬರೆದ ಅನಂತರ ಪಂಪನ ವಿಚಾರಗಳು ಬದಲಾವಣೆಗೊಳಗಾಗಿರುವ ಸಾಧ್ಯತೆಗಳೂ ಇವೆ,

ಈ ಎಲ್ಲಾ ಪ್ರಸಂಗಗಳನ್ನು ಗಮನಿಸಿದ ಅನಂತರ ಮತ್ತೆ ನಾವು ಮೊದಲಿನ ದುರ್ಯೋಧನನ ಸಂದರ್ಭಕ್ಕೆ ಬರೋಣ. ಕರ್ಣನಿಗೆ ರಾಜಮನೆತನಗಳಲ್ಲಿ ಅಸ್ತಿತ್ವವೇ ಇಲ್ಲದೆ ಹೋದಾಗ ದ್ರೋಣ ಮತ್ತು ಕೃಷ್ಣನಿಗೆ ಎದುರಾಗಿ ಕುಲೀನನಾದ ಕರ್ಣನಿಗೆ ದುರ್ಯೋಧನ ಕುಲಜ ನನ್ನಾಗಿಸುತ್ತಾನೆ. ಆಗ ಅವರೆಲ್ಲ ಮೌನ ತಾಳಿದರೂ ಅನಂತರದಲ್ಲಿ ಭೀಷ್ಮ ದ್ರೋಣ ಶಲ್ಯ ಇವರ ಸಂವಾದದಲ್ಲಿ ಮತ್ತೆ ಮತ್ತೆ ಜಾತಿ ಎನ್ನುವುದು ತಲೆ ಎತ್ತಿ ನಿಲ್ಲುತ್ತದೆ. ಇಲ್ಲಿ ಕರ್ಣನಿಗೆ ಯಾವುದೇ ಸ್ಥಾನಮಾನ ಇಲ್ಲದೆ ಹೋದಾಗ ಹೀಗೆ ನಿಂದೆಗೆ ಒಳಗಾಗುತ್ತಾನೆಯೋ ಹಾಗೆಯೇ, ಅಂಗಾಧಿಪತಿಯಾದ ನಂತರ ಮತ್ತು ಸೇನಾಪತಿಯ ಪಟ್ಟಗಟ್ಟಿದ ನಂತರವೂ ಕುಲವೆಂಬ ವಿಷವರ್ತುಲದಿಂದ ಮುಕ್ತನಾಗುವುದಿಲ್ಲ. ಇದೆಲ್ಲವೂ ತುಂಬ ಸಮರ್ಥನವಾಗಿ ಮೂಡಿಬಂದಿದ್ದು ಯಾವುದೇ ರೀತಿಯ ಆಸ್ತಿ, ಅಂತಸ್ತು; ವೈಭವ ಇದ್ದಾಗಲೂ ಒಳ್ಳೆಯ ನಡತೆ, ಗುಣ, ಶೌರ್ಯ, ಇದ್ದಾಗಲೂ ಜಾತಿ ಎನ್ನುವ ಭೂತ ಬೆನ್ನು ಬಿಡಲಾರದ್ದನ್ನು ಸ್ಪಷ್ಟಪಡಿಸುತ್ತದೆ.

ಪೊಡೆಮಡುವರ ಜೀಯೆಂಬರ್........ (2–85)

ಇಂಥವೆಲ್ಲ ಕೇವಲ ತೋರಿಕೆಗೆ ಎನ್ನುವುದು ಸ್ಪಷ್ಟವಾಗುತ್ತದೆ.[1]

ಮಹಾಭಾರತದಲ್ಲಿಯೇ ಆಗಲಿ, ಪಂಪ ಭಾರತದಲ್ಲಿಯೇ ಆಗಲಿ ಕರ್ಣನ ಪಾತ್ರ ಬಳಕೆಯಾಗುವುದು ಜಾತೀಯತೆಯ ನೆಲೆಯಲ್ಲಿ ಅನುಭವಿಸುವ ನೋವನ್ನು

---

1. ಕರ್ಣ ಕುಂತಿಯ ಮಗನೆಂದು ಗೊತ್ತಾದಾಗ "ಜಾತಿ" ಎಂಬ ಸ್ಫಟಿಕ ಪಂಜರದಿಂದ ಪಾರಾಗುತ್ತಾನೆ. ಆದರೆ ನಿಜ ಜೀವನದಲ್ಲಿ ಅಸ್ಪೃಶ್ಯರು ಈ ರೀತಿ ಪಾರಾಗಲು ಸಾಧ್ಯವಿಲ್ಲ.

ಅಭಿವ್ಯಕ್ತಪಡಿಸಲು ಬಳಸಿಕೊಳ್ಳಲಾಗುತ್ತದೆ. ಹೀಗೆ ಬಳಕೆಯಾದ ಅನಂತರ ಆ 'ಜಾತಿ' ಎಂಬ ಕುಲುಮೆಯಿಂದ ತೆಗೆದು ಬಿಡಲಾಗುತ್ತದೆ. ಎಂದರೆ ನೀ ಕೆಳ ಜಾತಿಯವನಲ್ಲ "ಕೇಳ ಕರ್ಣ ನಿನ್ನಾದಿಯೊಳಚ್ಚ ಕೆವಂತಿ" (9-64) ಎಂದು ಹೇಳಿ ಅಪವಿತ್ರ್ಯತೆಯ ಕವಚವನ್ನು ಬಿಚ್ಚಿ ಪಾವಿತ್ರ್ಯತೆಯ ಕವಚವನ್ನು ತೊಡಿಸಲಾಗುತ್ತದೆ. ಸಾಹಿತ್ಯ ಕೃತಿಗೆ ಕರ್ಣನಂತಹ ಪಾತ್ರಗಳ ಮೂಲಕ ಕೆಳಜಾತಿಯ ಅನುಭವಗಳು ಬೇಕು ಆದರೆ ಕೆಳಜಾತಿ ವ್ಯಕ್ತಿ ಬೇಡ ಎನ್ನುವ ತಂತ್ರ ಇಲ್ಲಿ ಹುದುಗಿಕೊಂಡಿದೆ. ಒಂದರ್ಥ-ದಲ್ಲಿ 'ಜಾತಿ' ಎಂಬ ಕರಿಬೇವನ್ನು ಅಡಿಗೆಗೆ ಒಗ್ಗರಣೆ ಕೊಡುವವರೆಗೆ ಬಳಸಿ ಅನಂತರ ಆ ಕರಿಬೇವಿನ ಸೊಪ್ಪನ್ನು ಪ್ರಯೋಜನಕ್ಕಿಲ್ಲವೆಂದು ತೆಗೆದೊಗೆದಂತಾಗಿದೆ. ಆದರೆ ಈ ಹಿಂದೆ ಗಮನಿಸಿದ ವಿಷ್ಣುಪುರಾಣದಲ್ಲಿ ಬರುವ ಸಾಕುತಂದೆಯ ಹಿಂದಿನ ಕಥೆಯನ್ನು ಗಮನಿಸಿದರೆ ಈ ವಿಚಾರ ಇನ್ನು ಹೆಚ್ಚು ಸ್ಪಷ್ಟವಾಗುತ್ತದೆ. ಕರ್ಣನನ್ನು ಕುಂತಿಯ ಮಗನೆಂದು ಹೇಳಿ ಜಾತಿ ಎಂಬ ಕೊಳಚೆಯಿಂದ ಹೊರ ತೆಗೆಯುವುದರ ಜೊತೆಗೆ ಕರ್ಣನನ್ನು ಸಾಕಿದ ವ್ಯಕ್ತಿಯನ್ನು ಸೂತ ಜಾತಿಯಿಂದ ಹೊರತೆಗೆದು ಅವನೂ ಮೂಲತಃ ಕ್ಷತ್ರಿಯ ಕುಲಕ್ಕೆ ಸಂಬಂಧಿಸಿದವನೆಂದು ಹೇಳುವುದು ಎಷ್ಟೊಂದು ಸ್ವಾರಸ್ಯಕರವಾಗಿದೆಯಲ್ಲವೆ? ಈ ರೀತಿಯ ವರ್ಣ ಸಂಕರದಿಂದಲೇ ಹೊಸ ಜಾತಿ-ಗಳು ಹುಟ್ಟಿಕೊಂಡವು ಎಂದು ಬುರುಡೆ ಬಿಡುವವರಿಗೆ ಇಂಥ ಕಥೆಗಳೇ ಆಧಾರವೂ ಆಗುತ್ತವೆ!

ಪಂಪ ಅರಿಕೇಸರಿಯನ್ನು ಹೊಗಳುವುದಕ್ಕೆ 'ಜೋಳವಾಳಿ'ಯಾಗಿರುವು-ದೊಂದೇ ಕಾರಣವಲ್ಲವೆನಿಸುತ್ತಿದೆ. ಹಾಗೆಯೇ ತನ್ನ ಕಾವ್ಯದ ಬಗ್ಗೆ, ತಮ್ಮ ಸಾಮರ್ಥ್ಯದ ಬಗ್ಗೆಯೂ ಹೇಳಿಕೊಳ್ಳುವ ಹೆಗ್ಗಳಿಕೆ ಸತ್ಯಾಂಶದಿಂದ ಕೂಡಿದಾಗಲೂ ಯಾವ ಕಾರಣಕ್ಕಾಗಿ ಈ ಪರಿಯಲ್ಲಿ ಹೇಳಿಕೊಳ್ಳುತ್ತಾನೆ ಎನ್ನುವ ಪ್ರಶ್ನೆಯನ್ನು ಹುಟ್ಟುತ್ತದೆ. ಈ ಮೇಲಿನ ಎರಡೂ ಪ್ರಶ್ನೆಗಳಿಗೆ ಪೂರಕವಾದ ಉತ್ತರವನ್ನು ಈ ಮೇಲೆ ಚರ್ಚಿಸಿದ ಸಾಂಸ್ಕೃತಿಕ ಸಂಘರ್ಷದ ಹಿನ್ನೆಲೆಯಲ್ಲಿಯೇ ಊಹಿಸಬಹುದಾದ ಸಾಧ್ಯತೆಯೊಂದಿದೆ. ಅದೆಂದರೆ ಸಾಮಂತ ಅರಸನಾದ ಅರಿಕೇಸರಿಯನ್ನು ದೇವ-ರಿಗಿಂತಲೂ (ನಾರಾಯಣ) ಮಿಗಿಲೆಂದು ಪಂಪ, ತಾನು ಹೇಳುವ "ಜೋಳದಪಾಳಿ" ಯಾಗಿರುವಾಗಲೂ ಆ ಗಡಿಯನ್ನು ಮೀರುತ್ತಾನೆ. ಹಾಗೆಯೇ ಅರಿಕೇಸರಿ ಇತಿಹಾಸ-ದಲ್ಲಿ ಸಾಮಂತ ಅರಸನಾಗಿಯೂ ಚಕ್ರವರ್ತಿಯ ಅಧಿನತೆಯನ್ನು ಮೀರಿ ಬದುಕಿ-ರಲೂಬಹುದು. ಹೀಗಿದ್ದಾಗಲೂ ಅರಿಕೇಸರಿ ಸಾಮಂತ ಅರಸನೇ ಆಗಿದ್ದಾನೆ. ಕಾವ್ಯದುದ್ದಕ್ಕೂ ಕಾಡುವ ಪ್ರಶ್ನೆ ಎಂದರೆ ಪ್ರತಿಯೊಂದು ಆಶ್ವಾಸಕ್ಕೂ ಅರಿಕೇಸರಿ-ಯನ್ನು ನೆಲೆ ನಿಲ್ಲಿಸುವ ಪಂಪ, ಅಪವಾದಾತ್ಮಕವಾಗಿ ಒಂದೆಡೆ ಚಕ್ರವರ್ತಿಯ ಬಗ್ಗೆ ಹೇಳುವುದನ್ನು ಬಿಟ್ಟರೆ ಮತ್ತೆಲ್ಲಿಯೂ ಆತನ ಬಗ್ಗೆ ಪ್ರಸ್ತಾಪಿಸುವುದಿಲ್ಲ ಯಾಕೆ?

ಪಂಪ ಮತ್ತು ಚಕ್ರವರ್ತಿಯ ನಡುವೆ ಇರುವ ಈ ಕಂದರಕ್ಕೆ ಕಾರಣವೇನಿರಬಹುದು? ಅಪವಾದಾತ್ಮಕವಾಗಿ ಒಮ್ಮೆ ಚಕ್ರವರ್ತಿಯ ಬಗ್ಗೆ ಹೇಳಿದರೂ, ಚಕ್ರವರ್ತಿಯ ಹೆಸರನ್ನೂ ಹೇಳುವುದಿಲ್ಲ; ಯಾಕಿರಬಹುದು? ಚಕ್ರವರ್ತಿಯನ್ನು ಸ್ಮರಿಸುವ ಸಂದರ್ಭವಾದರೂ ಎಂತಹುದು? ಇಂಥ ಪ್ರಶ್ನೆಗಳು ಏಳುವುದು ಸಹಜವಲ್ಲವೆ?

ತುಡುಗೆ ನಿಚ್ಚಲುಂ ಪಂಚ ರತ್ನಂಗಳುಂ ಪೊಡುಮಡೆ ತನ್ನಡುವಪ್ಪ ಟಂಗೆಗಳ್
ಮಡಿಯೊಳಾಗೆಯುಮಡ್ಕಣಂ ಕಂಡಾಗಳ್ ಪರಿಯ ಚಿತ್ತಾರಿಗೆಯುಂ
ಕೆಲದೊಳಿಕ್ಕಿ
ಕೊಡುವ ಬಾಡಕ್ಕಂ ಜೀವಧನಂಗಳ್ಗಂ ಬಿಡುವೆಣ್ಣಂ ಲೆಕ್ಕಮಿಲ್ಲೆ ನಿರಿಗಂ
ಗಿಡದೆ ಕೊಂಡಾಡಿದಂ ಬಲ್ಲಹನರಿಯೆ ಗುಣಾರ್ಣವಂ ಕವಿತಾಗುಣಾರ್ಣವನಂ
(14—55)

ಈ ಪಿರಿಯಕ್ಕರದಲ್ಲಿ ಪಂಪ ಅರಿಕೇಸರಿ ತನಗೆ ಕೊಟ್ಟ ವೈಭೋಗವನ್ನೆಲ್ಲ ಹೇಳಿಕೊಳ್ಳುತ್ತ (ಡಾ. ಡಿ. ಎಲ್. ನರಸಿಂಹಚಾರ ಅವರು ಅರ್ಥೈಸುವ ಹಾಗೆ) ರಾಷ್ಟ್ರಕೂಟ ಚಕ್ರವರ್ತಿಯಾದ ವಲ್ಲಭರಾಜನು ತಿಳಿಯುವಂತೆ ಸತ್ಕರಿಸಿದನು ಎಂದು ಹೇಳಿಕೊಳ್ಳುತ್ತಾನೆ. ಈ ರೀತಿ ಹೇಳಿದಾಗ ಯಾವ ಚಕ್ರವರ್ತಿಗೆ ತಾನೆ ಮನಸ್ಸಿನಲ್ಲಿ ಮುಳ್ಳು ಮುರಿದಂತೆ ಆಗುವುದಿಲ್ಲ? ಅದರಲ್ಲೂ ಈ ಸಂದರ್ಭದಲ್ಲಿ ಪಂಪನು ಚಕ್ರವರ್ತಿಯ ಬಗ್ಗೆ ಹೇಳಿಕೊಳ್ಳುವ ಅವಶ್ಯಕತೆಯಾದರೂಯೇನಿತ್ತು? ಬಹುಶ: ಪಂಪ "ಪಾಟಿಸುವೆನೊಯ್ಯನೆ ಮುಳ್ಳೊಳೆ ಮುಳ್ಳಂ" (9–67) ಎನ್ನುವ ತಂತ್ರ ಇಲ್ಲಿ ಬಳಸಿದ್ದಾನೆ ಎನಿಸುತ್ತದೆ. ಎಂದರೆ "ಧಾತ್ರೀವೇವಳಯನಿಳಿಂಪಂ" ಹಾಗೂ ಕವಿತಾಗುಣಾರ್ಣವನೂ ಆದ ಪಂಪನಿಗೆ ಚಕ್ರವರ್ತಿಯ ಆಶ್ರಯ ಸಿಗಲಿಲ್ಲ ಎಂಬ ಶೀತಲ ಕೊರಗೂ ಇರಬೇಕೆನಿಸುತ್ತದೆ. ಈ ಕಾರಣದಿಂದಲೇ ಪಂಪ ಅರಿಕೇಸರಿಯನ್ನು ಆ ಪರಿಯಲ್ಲಿ ಅಟ್ಟಕ್ಕೇರಿಸುತ್ತಾನೆ, ತನ್ನನ್ನೂ ತನ್ನ ಕವಿತಾ ಶಕ್ತಿಯನ್ನೂ ಎದೆತಟ್ಟಿ ಹೇಳಿಕೊಳ್ಳುತ್ತಾನೆ. ಆದರೆ ಡಿ. ಎಲ್. ನರಸಿಂಹಚಾರ ಅವರು ರಾಷ್ಟ್ರಕೂಟ ಚಕ್ರವರ್ತಿಯಾದ ಮೂರನೆಯ ಕೃಷ್ಣನಿಗೆ (939–968) ತಿಳಿಯುವಂತೆ ಸತ್ಕರಿಸಿದ ಎನ್ನುವ ಈ ಸಂದರ್ಭವನ್ನು "ಪಂಪನ ಸನ್ಮಾನ ಸಮಾರಂಭಕ್ಕೆ ಅರಿಕೇಸರಿ ತನ್ನ ಚಕ್ರವರ್ತಿಯಾಗಿದ್ದ ಮೂರನೆ ಕೃಷ್ಣನಿಗೆ ಆಹ್ವಾನ ಪತ್ರಿಕೆಯನ್ನು ಕಳುಹಿಸಿದ್ದಂತೆ ತೋರುತ್ತದೆ. ಎಂದು ಊಹಿಸುತ್ತಾರೆ. ಈ ಊಹೆ ಸರಿಯಾದದ್ದೆ ಆಗಿದೆ, ಹೀಗೆ ಕಳುಸಿದ್ದರಿಂದಲೋ ಅಥವಾ ಬಾಯಿಯಿಂದ ಬಾಯಿಗೆ ಹರಿದು ತಲುಪಿಯೋ ಪಂಪ ಮುಳ್ಳನ್ನು ಮುಳ್ಳಿನಿಂದ ತೆಗೆಯುವ ಕೆಲಸದಲ್ಲಿ, ಕೃಷ್ಣ– ದುರ್ಯೋಧನರು ಕಾವ್ಯದಲ್ಲಿ ಯಶಸ್ವಿಯಾದಂತೆ ಪಂಪನು ನಿಜ ಜೀವನದಲ್ಲಿ ಯಶಸ್ವಿಯಾಗಿರಬೇಕು.

● ಕೆ. ಎಂ. ಮುನಿಕೃಷ್ಣಪ್ಪ

# ತೆರೆದ ಹುಲ್ಲುಗಾವಲು

ಕತ್ತಲು ತನ್ನೆಲ್ಲ ಥಾಕತ್ತು ಬೀರಿ
ಅಮರಿಕೊಳ್ಳಲು ಸನ್ನಹ ನಡೆಸಿರುವ
ವೇಳೆ ಪುಟ್ಟ ಬಿಳಿ ನಕ್ಷತ್ರ
ಫಳ ಫಳ ಬೆಳಕು ಬೀರಿ
ನನ್ನೆಡೆ ನೋಡಿಕಣ್ಣು ಹೊಡೆಯಿತು

ಎಲಾ ಪುಟ್ಟ ನಕ್ಷತ್ರವೇ!
ವಿಜ್ಞಾನಿಗಳು ಬಹಳಗಾತ್ರ
ಇದೆಯೆಂದು ಹೇಳಿದರೂ ನನ್ನ
ಕಣ್ಣಳತೆಗೆ ನೀನಿರುವುದು ಇಷ್ಟೆ ತಾನೆ
— ನಾನು ಕಂಡದು
ನನಗೆ ದಕ್ಕಿದ್ದು
ನಿನ್ನೊಡನೆ ನನಗದೆಂಥ ಸರಸ

ಕತ್ತಲೆರಾಜನೂ ಬಾಗಿಲ ಮರೆಯಲಿ
ಇಣುಕಿ, ಎಲ್ಲವೋ ಕವಿ
ನನ್ನ ಮುಂದೆ ನಕ್ಷತ್ರಗಳ ಆಟ
ನಡೆಯುವುದಿಲ್ಲ ಕವಿತೆ
ಬರೆಯಲೇ ಬೇಕು ಅನ್ನಿಸಿದರೆ
ದೀಪ ಅಂಟಿಸಿಕೊ ನಕ್ಕು ಮಾಯವಾದ

ಎಂಥದೊ ಭಾವನೆಗೆ ಮನ
ತೆರೆದ ಹುಲ್ಲುಗಾವಲು ಅಲ್ಲಿ
ಮೇಯಲು ಕೋಣಗಳು
ಕೂರಲು ಹುಡುಗಿಯರು
ಪೈಪೋಟಿ ನಡೆಸಿರುವರು

ಪ್ರಭು ಖಾನಾಪುರೆ.

# ಹನಿ ಕವನಗಳು

## ಸತ್ಯ

ಜಗತ್ತಿನೆಲ್ಲ ಜನರ
ಭವಿಷ್ಯ ಹೇಳ್ತಿನಿ
ತಪ್ಪಾದ್ರ ಜೀಂವಾ ಕೊಡ್ತಿನ
ಎಲ್ಲರೂ ಸಾಯುತಾನ ಬದ್ಕತಾರ
ಕೆಲವರು ಸತ್ತ ಮ್ಯಾಲೂ ಬದ್ಕತಾರ

— ಒಂದು —

ನೀ ನನ್ನನ್ನು ಪ್ರೀತಿಸುತ್ತಿ
ಎಂದು ತಿಳಿದಿದ್ದೆ
ಆ ಮೇಲೆ ಗೊತ್ತಾಯಿತು
ಪೂಜಿಸುತ್ತಿಯೆಂದು.

— ಎರಡು —

ನೀ
ಒಂದು ಕ್ಷಿತಿಜ
ಕಾಣುತ್ತಿ
ಮುಟ್ಟಲು ಒಂದರೆ
ಲಕ್ಷ ಮೈಲು ಹಿಂದಕ್ಕೆ ಸರಿಯುತ್ತಿ

## ನೆನಪು

ನನ್ನ ಮಗಳು ಪುಟ್ಟಿ
ಚಟ್ಟನೆ ಚೀರಿದಾಗ
ಥಟ್ಟನೆ ನೆನಪಾಗುತ್ತಾಳೆ
ರೂಥಾಕನ್ನರ್.

# ಕೌಶಿಕ ಮತ್ತು ಪುಟ್ಟ ಹಕ್ಕಿ

ಹಕ್ಕಿಯೊಂದು ಹಾರಿ ಬಂದು
ಮರದ ಮೇಲೆ ಕುಳಿತುಕೊಂಡು
ಅಡವಿ ತಾಯ ಅಂದ ಕಂಡು
ಹಿಗ್ಗಿ ಹಾಡಿತು;
ಪುಕ್ಕಗಳನು ಪಕ್ಕ ಸರಿಸಿ
ಪಿಕ್ಕೆ ಹಾಕಿತು.

ಮುನಿಯೊಬ್ಬನು ಮರದ ಕೆಳಗೆ
ಸಕಲ ಲೋಕಗಳನು ಗೆಲುವ
ಬಯಕೆ ಹೊತ್ತು ಮನದ ಒಳಗೆ
ಪದ್ಮಾಸನ ಭಂಗಿಯಲ್ಲಿ
ಪರಲೋಕದ ಗುಂಗಿನಲ್ಲಿ
ಕಣ್ಣು ಮುಚ್ಚಿಕೊಂಡು ಧ್ಯಾನ ಮಾಡುತಿದ್ದನು.

ತಲೆಯ ಮೇಲೆ ಬಿದ್ದುದೇನು....?
ತಪೋನಿರತನಿರಲು ನಾನು....!
ನನ್ನ ಧ್ಯಾನ ಭಂಗಕ್ಕಾಗಿ ರಂಭೆ ಬಂದಳೇ....!
ಮಲ್ಲಿಗೆಯ ಮೆಲ್ಲಗೆ ಅವಳೆ ಎಸೆದಳೇ....!!

ಕಣ್ಣು ತೆರೆದ ತಪೋನಿಧಿ
ಬಳಿಯಲೆಲ್ಲೂ ರಂಭೆಯಿಲ್ಲ....!
ಕೊಂಬೆ ಮೇಲೆ ಕುಳಿತ ಪುಟ್ಟ ಹಕ್ಕಿ ಕಂಡಿತು
ಕಣ್ಣೆರಡೂ ಕೆಂಪಗಾಗಿ ಕೆಂಡಕಾರಿತು.

ಎಲವೆಲವೋ ಕ್ಷುದ್ರ ಜಂತು
ಕೌಶಿಕನ ತಲೆಯ ಮೇಲೆ
ಪಿಕ್ಕೆ ಹಾಕೋ ಸೊಕ್ಕೆ ನಿನಗೆ

ನಿನ್ನ ಕೋಪ ಕೆರಳಿದರೆ
ಮರಳಿ ಹೋಗಲಾರೆ ಮನೆಗೆ
ನಿನ್ನ ತಂದೆ-ತಾಯಿಗಿಂದು ಹೇಳಿ ಬಂದೆಯಾ.....?

ಬೆದರಲಿಲ್ಲ ಪುಟ್ಟ ಹಕ್ಕಿ ನಕ್ಕು ನುಡಿಯಿತು:
ಈ ನೆಲವೇ ನನ್ನ ತಂದೆ
ಈ ಕಾಡೇ ನನ್ನ ತಾಯಿ
ಎಲೆ ಎಲೆಯಲೂ ಅವಳು ನನಗೆ
ಲಾಲಿ ಎನುವಳು
ಕೋಟಿ ಕಣ್ಣಲವಳು ನನ್ನ ಕಾಯುತಿರುವಳು.

ಟೊಂಗೆ, ಟೊಂಗೆ, ಟೊಂಗೆ ಮೇಲೆ
ಜೀಗ ಜಂಗಳೆಂದು ಜಿಗಿದು
ಪುಟ್ಟ ಹಕ್ಕಿ ತುಂಟತನದಿ ಪ್ರಶ್ನೆ ಮಾಡಿತು:
ನಾಡ ಬಿಟ್ಟು ಕಾಡಿಗೇಕೆ ಬಂದ ನೀನು ಕೌಶಿಕ....?
ನಿನಗೆ ಅಲ್ಲಿ ಇಲ್ಲವೆ ಮಾಡಲೇನೂ ಕಾಯಕ....
ನನ್ನ ತಾಯ ಮಡಿಲಲ್ಲಿ
ನಲಿವುದೆನ್ನ ಜನ್ಮ ಹಕ್ಕು
ಅದನೆಲ್ಲಾ ಹೇಳಲಿಕ್ಕೆ ನೀನಾವೂರ ದೊಣ್ಣೆ ನಾಯಕ...?

ಸಾಕು ಮಾಡು ಉದ್ಧಟತನ:
'ಅಬ್ಬಬ್ಬಾ ಎಷ್ಟು ಸೊಕ್ಕು
ಹಿಪ್ಪಿಟ್ಟಿನ ಗಾತ್ರವಿಲ್ಲ....!
ನನ್ನ ಶಾಪ ತಟ್ಟಿದರೆ ಸುಟ್ಟು ನೀನು ಹೋಗುವೆ
ಉರಿದು ಬೂದಿಯಾಗುವೆ....!

ಸಾರ್ಥಕ, ಸಾರ್ಥಕ ಕೌಶಿಕ
ನಿನ್ನ ತಪಶ್ಶಕ್ತಿಯಿಂದು ಪರಮ ಸಾರ್ಥಕ....!
ಗುಬ್ಬಿ ಮೇಲೆ ಬ್ರಹ್ಮಾಸ್ತ್ರ
ಹೇಳತೇನು ನಿನ್ನ ಶಾಸ್ತ್ರ
ಪ್ರೀತಿಸುವ ಹೃದಯಕ್ಕೂ ಪಾತ್ರವಿರುವುದೇ....?
ನಿನ್ನ ಜೀವ ಹರಣದ ಯೋಚನೆ
ಜಗದ ಬೆಳಕಾಗುವುದೇ
ಕರುಣೆಯಿರದ ತತ್ವದಲ್ಲಿ ಸತ್ವವಿರುವುದೇ?

ಪುಟ್ಟ ಹಕ್ಕಿ ಗುಟುಕು ನುಂಗಿ ಗುಟ್ಟು ಹೇಳಿತು:
ಬದುಕಿಗೆ ನೀ ಬದ್ಧನಾಗು
ದುಡಿದ ಜನರ ಎದೆಗಳಲ್ಲಿ
ನಿಜದ ನಿಧಿಯ ಹುಡುಕು ಹೋಗು
ಸದ್ದಿಲ್ಲದೆ ಅಲ್ಲಿ ನೀನು ಬುದ್ಧನಾಗುವೆ
ಅನುಭವಗಳ ಆಳದಲ್ಲಿ ಅರಿವು ಇರುವುದಲ್ಲವೆ?
ಅಡವಿಯಲ್ಲಿ ಅಡಗಿದರೆ ಸತ್ಯ ಸಿಗುವುದೆ ...?

ಸಾಕು, ಸಾಕು, ಸಾಕು ಮಾತು
ಮಡಿಯನೆಲ್ಲ ಕೆಡಿಸಿಬಿಟ್ಟೆ
ನನ್ನ ತಲೆಯ ಮೇಲೆ ಹೇತು
ಮಾತಿನಲ್ಲಿ ಸೆಣಸಬೇಡ ಸೋತು ಹೋಗುವೆ.

ಕಿಲ, ಕಿಲ, ಕಿಲ ಕುಲುಕುತ್ತಾ ಹಕ್ಕಿ ಹಾಡಿತು
ನಾಡಿನಂತೆ ಕಾಡಿನಲ್ಲಿ
ಗೋಡೆಗಳನು ಕಟ್ಟಬೇಡ
ನನ್ನ ಒಂದು ಹಾಡಿಗವು ಉಳಿಯಬಲ್ಲವೇ....?

ಉರಿದೆದ್ದನು ಕೌಶಿಕ....!
ಉರಿಯಲಿಲ್ಲ ಪುಟ್ಟ ಹಕ್ಕಿ.....!!
ಮಣ, ಮಣ, ಮಣ ಮಂತ್ರಗಳನ್ನು ಹೊರಗೆ ಸುರಿಸಿದ
ದಂಡವನ್ನು ಗರ್ರನೆ ಸುತ್ತ ತಿರುಪಿದ.
ಕೊರಳ ಚಾಚಿ, ಕಿಲ, ಕಿಲ, ಕಿಲ ಹಕ್ಕಿ ನಕ್ಕಿತು:
"ತಮಸ್ಸನ್ನೇ ಗೆಲ್ಲದವಗೆ
ತಪಶ್ಶಕ್ತಿ ಸಿದ್ಧಿಸೀತೆ....?"
ಎಂದ ಪುಟ್ಟ ಹಕ್ಕಿ ತನ್ನ ರೆಕ್ಕೆ ಬಿಚ್ಚಿತು
ಪುರ್ರೆಂದು ಗಗನಕ್ಕೆ ಹಾರಿ ಹೋಯಿತು.

* ಈ ಪದ್ಯದ ಹಿನ್ನಲೆಯಾದ ಕಥೆಯ ಸಾರಾಂಶ ಇದು : ಕೌಶಿಕಮುನಿ ಕಾಡಿನ ಮರವೊಂದರಡಿ ತಪೋನಿರತನಾಗಿ ಕುಳಿತಿರುವಾಗ ಕಾಡು ಹಕ್ಕಿಯೊಂದು. ಅವನ ತಲೆಯ ಮೇಲೆ ಹಿಕ್ಕೆ ಹಾಕಿ ಬಿಡುತ್ತದೆ. ಸಿಟ್ಟಾದ ಮುನಿಯು ನೋಟದ ತೀಕ್ಷ್ಣತೆಗೆ ಆ ಹಕ್ಕಿ ಸುಟ್ಟು ಬೂದಿಯಾಗುತ್ತದೆ. (ಇದು ಮಹಾಭಾರತದ ಒಂದು ಉಪ ಕಥೆ)

● ಕು|| ತುಮಕೂರು ಭಾರ್ಗವಿ

## ಕನಸು

ಕನಸುಗಳೇ ಹೀಗೆ ಕೈಗೆಟುಕದ ನಕ್ಷತ್ರಗಳ ಹಾಗೆ
ಮಲಗಿ ನಿದ್ರಿಸುವಾಗ ಬಣ್ಣದ ರೂಪ ತಾಳಿ
ನಿದ್ರೆಯಿಂದ ಎಚ್ಚೆತ್ತಾಗ ಬಣ್ಣ ಕಳೆದುಕೊಂಡು
ಬರೀ ನೆನಪಾಗಿ ಉಳಿದು ಬಿಡುತ್ತವೆ

## ವೈವಿಧ್ಯತೆ

ಅಗಸನ ಮಾತು ಕೇಳಿ ಪ್ರಜಾನಿಂದೆಗೆ ಹೆದರಿ
ಸೀತೆಯ ಶೀಲ ಶಂಕಿಸಿ ಕಾಡಿಗಟ್ಟಿದ 'ರಾಮ'
"ಮರ್ಯಾದಾ ಪುರುಷೋತ್ತಮ"
ದೂರ್ವಾಸನ ಶಾಪದಿಂದ ಮುಕ್ತನಾದ ದುಷ್ಯಂತನನು
ಮರಳಿ ಪತಿಯೆಂದು ಸ್ವೀಕರಿಸಿದ ಶಕುಂತಲೆ
"ಕ್ಷಮಯಾ ಧರಿತ್ರಿ"

● ವಿಜಯಲಕ್ಷ್ಮೀ ಕೆ. ಹುಂಗರಗಿ

## ಬೆಳ್ಳಿ ಮೋಡ

ಶುಭ್ರ ಶ್ವೇತ ಬಣ್ಣದ ಬೆಳ್ಳಿ ಮೋಡವೆ !
ಸ್ವಚ್ಛಂದವಾಗಿ ತೇಲುತ್ತ ಎಲ್ಲಿಗೆ ಹೊರಟಿರುವಿ ?
ದಿನವೂ ಸಂಜೆ ಬಾನೆತ್ತರಕ್ಕೆ ನೋಡುವ
ಹಲವು ಬಗೆಯ ಚಿತ್ರದಲಿ ಕಾಣುವಿ
ಮನದಲ್ಲಿಯ ಬೇಸರವನ್ನು ಬಯಲು ಮಾಡುವಿ
ಸ್ಕ್ಯಾಯುಲಾರ್ಕ ಪಕ್ಷಿಯಂತೆಹಾಯಾಗಿ ಹಾರಾಡುವಿ
ಗಗನದಲ್ಲಿ ಬಿಳಿ ಶಿಲೆಯಾಗಿ ಪಸರಿಸುವಿ
ಗಾಳಿಯ ಕುಶಲತೆಯಿಂದ ಹತ್ತಾರು ರೂಪ ತಾಳುವಿ
ಬೆಟ್ಟ ಪರ್ವತಗಳ ಸಾಲುಗಳಿಗೆ ಕಳಸವಾಗುವಿ
ಮೇಘದ ಮಾಲೆಯಾಗಿ ಚಂದ್ರನ ಮರೆ ಮಾಡುವಿ
ಬಾ ಶ್ವೇತ ವರ್ಣದ ಬೆಳ್ಳಿ ಮೋಡವೇ !
ಈ ಮನುಜರ ಮನವನ್ನು ಶುಭ್ರಗೊಳಿಸು.

# ವಿಠ್ಠೂ

ಹೌದು ನನಗೆ ಅವನನ್ನೇ ನೋಡಬೇಕೆನಿಸಿತ್ತು. ಅಂಬವ್ವ ತೀರಿಕೊಂಡ ಸುದ್ದಿ ಬಂದು ಇಲ್ಲಿಗೆ ಐದು ಆರು ತಿಂಗಳೇ ಆದವು ಹೌದು ಈಗ ವಿಠ್ಠೂ ಹೇಗಿರಬಹುದು ? ತಾನೇ ಅಡುಗೆ ಮಾಡಿಕೊಳ್ಳುತ್ತಿರಬೇಕು. ನಿರ್ವಾಹವೇ ಇಲ್ಲ. ಬೇಸರವಾದರೆ ಬಿಟ್ಟಾನು. ಕೈಯಲ್ಲಿ ದುಡ್ಡಿಲ್ಲ. ಇಲ್ಲಿ ಅಣ್ಣನ ಮನೆಯಲ್ಲಿ ಆಗೀಗ ಕರೆದರೂ ಹೂಂ. ಹಬ್ಬ ಹುಣ್ಣಿವೆ ಅಂತಹ ಸಮಯಗಳಲ್ಲಿ ಕರೆಯಲೇಬೇಕಾಗುತ್ತದೆ. ಇಲ್ಲಾ ತಾಟಿನಲ್ಲಿ ಹಾಕಿ ಕಳಿಸಿದರೂ ಕಳಿಸಬಹುದು. ಈಗ ವಿಠ್ಠೂ ಆದಷ್ಟು ಸ್ವತಂತ್ರನೇ ಆಗಿರಬೇಕು ಎನಿಸುತ್ತಾನೆ. ತಾಯಿಯನ್ನ ಬಹಳೇ ಹಚ್ಚಿಕೊಂಡಿದ್ದ. ಮನೆಗಳು ಬೇರೆಯಾದ ಮೇಲೆ ಅವನು ಅಂಬವ್ವ ಕೂಡಿಯೇ ಇದ್ದುದ್ದು ಹಾಗೆ ಇಲ್ಲಿಗೆ ಹದಿನೈದು ವರ್ಷದ ಮೇಲೆಯೇ ಆಯಿತು, ಅಂಬವ್ವ ಸತ್ತಾಗ ನಾನು ಅಲ್ಲಿರಲಿಲ್ಲ ಅಂತೂ ಅವಳು ದೈವಾನಳೇ ಅನ್ನಬೇಕು. ಯಾವ ಜ್ವಾನಿ ಬ್ಯಾಸರಿಕೆ ಇಲ್ಲದೆ ಕಣ್ಮುಚಿದಳು. ಇಲ್ಲವಾದರೆ ಮಾಡುವವರಾದರೂ ಯಾರು ? ಬಡತನ, ಬಳಗದವರು, ಅವರು ಇವರು ಅಂದಿದ್ದರೆ. ಸಾವು ಹೀಗೇ ಬರಬೇಕು. ಎಲ್ಲರಿಗೂ ಹೀಗೆ ಆಗಬೇಕಲ್ಲ, ಅಂದ ಹಾಗೆ ಅಂಬವ್ವ ಸಾಯುವಾಗ ಸಾವನ್ನ ನಿಶ್ಚಿಂತವಾಗಿ ಕಂಡವರ ಹಾಗೆ ರಾತ್ರಿ ಸಾಯಲಿರುವಾಕಿ ಮುಂಜಾನೆಯೇ ನಮ್ಮಜ್ಜಿಗೆ ನಮಸ್ಕಾರಮಾಡಿ ನನ್ನ ದಿನ ಮುಟ್ಟಿದವು ಕರೀಲಿಕ್ಕ ಬಂದಾರ ಎಂದು ಹೇಳಿದ್ದ ಸುದ್ದಿ ಕೇಳಿ ನನಗೆ ವಿಚಿತ್ರವೇ ಎನಿಸಿತು. ಆದರೂ ಒಂದು ವಿಷಯ ಮಾತ್ರ ನಿಜ. ಆಕೆ ಸತ್ತಳು ನಿರಂಬಳವಾಗಿ, ಮುಗಿಯಿತು. ಇನ್ನೂ ಚಿಂತೆಮಾಡಬೇಡಿ ಏನಾದಿತು ಎಂದುಕೊಂಡು ಶಾಂತವಾಗಿಯೇ ಕಣ್ಣು ಮುಚ್ಚಿರಬೇಕು. ಆಕೆ ವಿಠ್ಠೂನ ಚಿಂತೆಯನ್ನು ಕಡೆಯ ಗಳಿಗೆಯಲ್ಲಿ ಬಿಟ್ಟುಕೊಟ್ಟಿರಬೇಕು. ಸಾವು ಹೀಗೆ ನಮ್ಮನ್ನೆಲ್ಲ ಬಯಲು ಮಾಡಿಬಿಡುತ್ತಾದಲ್ಲ ಎನಿಸಿ ಬೀಡುತ್ತದೆ. ಮತ್ತೆ ವಿಠ್ಠೂ ನೆನಪಾದಗಾಲೊಮ್ಮೆ ಬಹಳಹೊತ್ತು ಕಾಡಿಸುತ್ತಾನೆ, ಮನೆ, ಹೊಲ, ಪಾಲಾದ ಮೇಲೆ ನಾಲ್ಕು ಜನ ಅಣ್ಣ ತಮ್ಮಂದಿರಲ್ಲಿ ಬಂದುದ್ದು ಅಷ್ಟಿಷ್ಟು, ತುಣುಕು ಮನೆ ವಿಠ್ಠೂ ತಾಯಿಯೊಡನೆ ಒಂದು ಕಡೆ ಉಳಿದ, ಮೊದಲಿನಿಂಲೂ ಅಷ್ಟಾಗಿ ಲಕ್ಷ ಕೊಟ್ಟು ಓದಲೇ ಇಲ್ಲಾ ಆ ಮನುಷ್ಯ ಅವನಾದರೂ ಏನು ಮಾಡುತ್ತಾನೆ ದಡ್ಡ ಗುಂಪಿನಲ್ಲಿ ಎಣಿಕೆಯಾದವನು, ಪುಸ್ತಕ ಎಷ್ಟು ಓದಿದರೂ ತಲೆಗೆ ಹತ್ತಲೇ ಇಲ್ಲ ಮೆಟ್ರಿಕ್ ದಾಟಲಿಕ್ಕೆ ಏಳು-ಎಂಟು ಸಲ ಕೂಡಬೇಕಾಯಿತು,

ಅಯ್ಯೋ ಈ ಕಾಲದಲ್ಲಿ ಎಂಥೆಂಥವರಿಗೇ ನೌಕರಿಯಿಲ್ಲ, ಇನ್ನು ಇವನಿಗೆ ನೌಕರಿ
ಕೊಡುವವರು ಯಾರು ? ಆದರೂ ವಿಠ್ಠು ಮಾರವಾಡಿಗಳ ಒಂದು ಅಂಗಡಿ
ಯಲ್ಲಿ ಒಂದಿಷ್ಟು ದಿನ ನೌಕರಿ ಮಾಡಿದ ಆಮೇಲೆ ಅಲ್ಲಿಂದ ಮತ್ತೊಂದು
ಅಂಗಡಿಯಲ್ಲಿ ಒಂದಿಷ್ಟು ದಿನ.... ಕಡೆಗೆ ಯಾವುದೋ ಕಾರಣಕ್ಕೆ.... ಇಲ್ಲ. ಯಾವ
ಕಾರಣವೂ ಇಲ್ಲ, ಶುದ್ಧ ಆಲಸ್ಯಕ್ಕಾಗಿ...ಹೊಲದಿಂದ ಬರುತ್ತಿದ್ದ ಅಷ್ಟಿಷ್ಟು ಕಾಸು
ಅಷ್ಟರಲ್ಲೇ ತಾಯಿ ಮಗ ಕಾಲ ನೂಕಿದರು. ಅಂಬವ್ವ ಏನೂ ಮಾಡುತ್ತಾಳೆ.
ಬೈದಳು. ಚೆನ್ನಾಗಿಯೇ ಬೈದಳು ಕಡೆಗೆ ತಾನೆ ಬೇಸರ ಮಾಡಿಕೊಂಡುಬಿಟ್ಟಳು
ಅವರ ಹಣೆಬರಹ ಬರದದ್ದ ಆದೀತು ಎಂದು ಸುಮ್ಮನಾದರು. ವಿಠ್ಠು ಯಾವ
ಕೆಲಸವೂ ಇಲ್ಲದೇ ದಿನ ಕಳೆದ. ಊರಿಗೆ ಹೋದಾಗೊಮ್ಮೆ ಖಂಡಿತ ಮಾತ
ನಾಡಿಸುತ್ತಿದ್ದ. ' ಆರಾಮ ' ನ್ನುತ್ತಿದ್ದ. ನಗುತ್ತಿದ್ದ. ಈಗ
ಅವನ ವಯಸ್ಸು ನಾಲ್ವತ್ತೈದಕ್ಕಿರಬೇಕು, ವರ್ಷ ಒಂದೋ ಎರಡೋ ಸಲ
ಊರಿಗೆ ಹೋಗುವವ ನಾನು ಈ ಕೆಲವು ವರ್ಷಗಳಲ್ಲಿ ಒಂದಿಷ್ಟು ಬದಲಾವಣೆ
ಗುರುತಿಸಿದ್ದೇನೆ. ಅವನತ್ತ ಕಾಡುವ ನೆನಪುಗಳು ಎಲ್ಲಿಂದ ಪ್ರಾರಂಭವಾಗುತ್ತವೆ ?
ಹುಂ.... ಅಲ್ಲಿಂದಲೇ ಇರಬೇಕು ನಾನು ಬಚ್ಚಲಲ್ಲಿ ಬೆತ್ತಲೆಯಾಗಿ ಸ್ನಾ
ಮಾಡುತ್ತಿದ್ದಾಗ ತಟಕ್ಕನೆ ಒಳಗೆ ಬಂದ ಅವನು ಒಂದು ಕ್ಷಣ ನಿಂತುಬಿಟ್ಟ
ಆಮೇಲೆ ಕೆಲ ದಿನ ನನ್ನನ್ನು ನೋಡಿದಾಗ ಅವನ್ನೇ ನೆನಪಿಸುವ ವಿಶೇಷದ ನ
ನಗುತ್ತಿದ್ದ. ಅವು ನನ್ನ ಕಾಲೇಜಿನ ದಿನಗಳು. ಕಾಮ ಚಿಗುರೊಡೆಯುತ್ತಿದ್ದ ಕಾ
ವಿಠ್ಠು ಒದುವುದನ್ನೆಲ್ಲ ಮುಗಿಸಿ ಆಗಿತ್ತು.

ಸಿನಿಮಾದ ಸುದ್ದಿ ಆಗ ಬಹಳ ಮಾತನಾಡುತ್ತಿದ್ದ, ಊರಿನಲ್ಲಿ ಮದು
ವೆಯ ಸುದ್ದಿ, ಅನೈತಿಕ ಸಂಬಂಧಗಳ ಮಾತು ಬಂದಾಗಲೆಲ್ಲ ಆಸಕ್ತಿ ವಹಿಸಿ
ಮಾತನಾಡುತ್ತಿದ್ದ, ನಮ್ಮ ಮನೆಯ ಎದುರಿನಲ್ಲಿಯೇ ಅಂಥದೊಂದು ಪ್ರ
ರಣ ನಡೆಯುತ್ತಿದ್ದಾಗ ಇವನಿಗೆ ಒಳ್ಳೆ ಬಿಸಿಬಿಸಿ ಆಹಾರವೇ ಆಗಿತ್ತು. ನಿ
ಗ್ಯಾಕ ಬೇಕೋ ಅಜ್ಜಿ ಅವನ ಮಾತಿಗೆ ಸಿಟ್ಟಿನಿಂದ ಅಡ್ಡಿ ಹಾಕುತ್ತಿದ್ದಳು.

ಹೂಂ. ವಿಠ್ಠುನ ಮದುವೆಯ ಸುದ್ದಿಯೂ ಒಮ್ಮೆ ನಡೆದು ಹೋಯಿ
ಕರಿಯ ಆನೆಯಂತಹ ಹುಡಿಗಿಯೊಬ್ಬಳು ಮನೆಗೆ ಬಂದು ಹೋದಳು. ಅ
ಆ ಮೇಲೆ ಮುರಿದು ಬಿದ್ದು ಹೋಯಿತು. ಈ ನಡುವೆ ಮಳೆ ಕೈಕೊಟ್ಟಿ
ಮೂರು ವರ್ಷ ನಾಲ್ಕು ವರ್ಷ ಹಾಗೇ ಮುಂದುವರಿಯಿತು. ಜೋರು ಪಾ
ಕಾಳು ಅಷ್ಟರಲ್ಲೇ ದಿನ ಸಾಗಬೇಕು ವಿಠ್ಠುನಿಗೆ ಆಸೆ ಇದ್ದರೂ ಮದುವೆ
ಮಾತು ಎತ್ತುವವರು ಯಾರು ? ಈ ನಡುವೆ ಬಟ್ಟೆ ಬರೆಗೂ ಕಷ್ಟವಾಯಿ
ಹರಕು ಪಾಯಿಜಾಮ ಒಮ್ಮೊಮ್ಮೆ ಪಂಜೆಯ ಮೇಲೆಯ ವಿಠ್ಠುನನ್ನು ನೋಡಿ
ಜೀವ ಗಟ್ಟಿ.

ನನ್ನ ಕಾಲೇಜು, ಯುನಿವ್ಹರ್ಸಿಟಿ ಎಲ್ಲಾ ಮುಗಿದು ಒಂದು ಕೆಲಸ ಸಿಂದು ಆದಮೇಲೆ ಮದುವೆಯೂ ಆಯಿತು. ಹೆಂಡತಿಯೊಡನೆ ಊರಿಗೆ ಹೋಗಿದ್ದೂ ಆಯಿತು. ವಿಠ್ಯೂ ಕದ್ದು ಕದ್ದು ನನ್ನ ಹೆಂಡತಿಯನ್ನು ನೋಡಿದ್ದೂ ಆಯಿತು.

ಈ ನಡುವೆ ವಿಠ್ಯೂನಿಗೆ ಯತಿಭ್ರಮಣೆಯಂಥದ್ದೇನೊ ಆಗಿಕೂತಲ್ಲಿಯೇ ಕೂತುಬಿಡುವದು, ಮಾತಿಲ್ಲ, ಕತೆಯಿಲ್ಲ ನಡೆಯಿತು. ಡಾಕ್ಟರುಗಳಿಗೆ ತೋರಿಸಿ ಯಾಯಿತು, ಏನೂ ಆಗಲಿಲ್ಲ. ದೂರದ ಊರಿಂದ ಯಾರೋ ಗಾಂವಟೀ ವೈದ್ಯ ಬಂದರು. ಅದೇನೋ ಬಾವಿಯ ಅಗ್ಗದಿಂದ ಕೈಕಾಲು ಕಟ್ಟಿ ಮೂಗಿನಲ್ಲಿ ಔಷಧಿ ಹಾಕುತ್ತಿದ್ದರಂತೆ.... ವಿಠ್ಯೂ ಈ ಮತ್ತೆ ಮೊದಲಿನಂತೆಯೇ ಇದ್ದಾನೆ.

ನನಗೀಗ ಒಂದು ಮಗುವಾಗಿ ಊರಿಗೆ ಹೋದಾಗ ಕರೆದುಕೊಂಡು ಹೋಗಿದ್ದ ಅಪ್ಪನ ಹಾಗೆಯೇ ಇದ್ದೆ ಎಂದಿದ್ದ, "ಇರಬೇಕೇನೊ' ಎಂದು ಕೇಳಿದ್ದ 'ಇಳೀರಿ. ಇಳೀರಿ'

ಗದ್ದಲವೇ ಎದ್ದಿತು. ಒಂದಿಷ್ಟು ಜನ ಏಳತೊಡಗಿದ್ದರು.
ಬಸ್ಸಿಗೇನೊ ಆಗಿತ್ತು.
ರಾತ್ರಿ 8 ಗಂಟೆ ದಾಟಿದ ಹಾಗಿತ್ತು. ನಾನು ಇಳಿದು ಬಂದೆ ಕಂಡಕ್ಟರ-ಡ್ರಾಯಿವರ ಮುಂದಿನ ಗಾಲಿಯ ಹತ್ತಿರ ಕುಳಿತು ಏನೇನೋ ನೋಡುತ್ತಿದ್ದರು.

ಯಾವ ಊರು ಸಮೀಪವಿಲ್ಲದ ಹಾಗೆ ನಡುವೆ ಎಲ್ಲೊ ಬಸ್ಸು ನಿಂತಿತ್ತು. ಸುತ್ತೆಲ್ಲ ಬಯಲು ಆದೇ ಆಗ ಹುಣ್ಣಿವೆ ದಾಟಿ ಎರಡು ಮೂರು ದಿನ ಕಳೆದಿರಬೇಕು! ಆಕಾಶದಲ್ಲಿ ಇನ್ನೂ ಶುಭ್ರ ಬೆಳುಪಿತ್ತು. ಜನ ಎಲ್ಲ ನಿಂತುಕೊಂಡು ಗದ್ದಲ ಎಬ್ಬಿಸಿದರು. ನಾನು ಸ್ವಲ್ಪ ಹೊತ್ತು, ನೋಡುತ್ತ ನಿಂತವನು. ಇದನ್ನೇನು ನೋಡುವುದು, ನನಗೆ ತಿಳಿಯುವುದಾದರೂ ಏನು ಎಂದುಕೊಂಡು ಸ್ವಲ್ಪ ದೂರ ನಡೆದುಕೊಂಡು ಬಂದೆ, ಮೂತ್ರ ಮಾಡಬೇಕೆನಿಸಿತು. ಅದನ್ನು ತೀರಿಸಿಕೊಂಡು ಮತ್ತೆ ರೋಡಿನ ಮೇಲೆ ಬಂದಾಗ ಏನೂ ಹೊಸ ಅನುಭವದ ಹಾಗೇ ವಿಶಾಲ ಆಗಸ ಹೊಳೆಯುತ್ತಾ ಸುಮ್ಮನೆ ಬಿದ್ದುಕೊಂಡ ಟಾರ್ರೋಡು, ಎಲ್ಲ ಕಡೆಗೆ ಬಯಲು ಕರಿಯ ಬಯಲು

ಈ ಬಯಲಿಗೂ ತನ್ನದೇ ಆದ ಸೊಗಸುಂಟು ಬಯಲು ಸೀಮೆಯಲ್ಲಿ ಹುಟ್ಟಿ ಬಂದವರಿಗೆ ಗೊತ್ತು ಅದು. ಬಸ್ಸಿನ್ನು ಇಷ್ಟು ಬೇಗ ಸಿದ್ಧಗೊಳ್ಳುವುದಿಲ್ಲ ಯಾಕೆ ಹಾಗೇ ನಡೆದುಕೊಂಡು ಹೋಗಬಾರದು ಎನಿಸಿತು. ಮೆಲ್ಲಗೆ ನಡೆದುಕೊಂಡು ಹೋದೆ. ಹೌದು ಇಂಥ ಸಮಯಗಳಲ್ಲಿ ವೇಗವಾಗಿ ನಡೆಯಲೇಬಾರದು ಆಯ್ತೋ ಅದರ ಸೊಗಸೇ ಹೋಗಿಬಿಡುತ್ತದೆ. ನನಗೆ ಹೀಗೆ ಪ್ರಶಾಂತವಾದ ನೀರವ ಸಮಯಗಳಲ್ಲಿ ಹೆಂಡತಿಯ ಅವಳೊಡನೆಯ ಅಲ್ಲಿಯ ನೆನಪಾಗುತ್ತದೆ, ಕಾಡುತ್ತದೆ ಸುಣ್ಣನೆಯ ಚಿತ್ತಲೆಯಲ್ಲಿ ಒತ್ತಿಕೊಂಡ ಅನುಭವದ ಗಾಳಿಯಲ್ಲೇ ಸೋಂಕಿಬಿಡುತ್ತದೆ ಈಗ ರಜೆಯಲ್ಲಿ ಇವಳು ಎರಡು ತಿಂಗಳೇ ಜೊತೆಯಲ್ಲಿದ್ದ ಸಿಗಲಿ ತುಂಬಾ ತುಂಬಾ ತೀವ್ರವಾಗಿ ಅನುಭವಿಸಬೇಕು....

ನನಗೆಷ್ಟೋ ಸಲ ಅನ್ನಿಸಿಬಿಡುತ್ತದೆ. ಕಾಮ ಕಾಮ ಕೆಟ್ಟದ್ದಲ್ಲವೇ ಅಲ್ಲ ಹೆಂದು.... ಅದರ ಉತ್ಕಟತೆ ಯೋಗಿಗಳು ಅನುಭವಿಸುತ್ತಾರಂತಲ್ಲ ಅಂಥದೇ ಆಗಿದೇ ಎಂದು ಅದೇನೋ ನನ್ನನ್ನ ಎಲ್ಲಿಕಡೆಯಿಂದಲೂ ಬಯಲು ಮಾಡಿಬಿಡುತ್ತದೆ.

ಹೂಂ, ಹೌದು ನಮ್ಮ ಪಿಯೂನ ಪರಿಸ್ಥಿತಿ ನೆನೆಸಿಕೊಂಡರೇ ಪಾಪ ಎನಿಸುತ್ತದೆ. ಪರ್ ಪರ್ ಅಂತ ಬಸ್ಸಿನ ಶಬ್ದದೊಂದಿಗೆ ಪಿಯೂನ ನೆನಪು ಕಲಸಿಕೊಂಡು ಬಿಟ್ಟಿತು.

ಬಸ್ಸಿನಲ್ಲಿ ಸುದೈವಕ್ಕೆ ಕಿಟಕಿಯ ಸೀಟೇಸಿಕ್ಕಿತ್ತು. ಹೊರಗೆ ದೃಷ್ಟಿ ಇಟ್ಟು ಆಗಸದಲ್ಲಿ ಕರಿಯ ಬಯಲಿನಲ್ಲಿ ಮುಳುಗಿಹೋದೆ. ಮಧ್ಯ ಪಿಯೂನ ನೆನಪು ಬಸ್ಸಿನ ಗದ್ದಲದಾಗೆ ಬಂದು ಬಿಡುತ್ತಿತ್ತು. ಅಲ್ಲಿ ನಾನು ಅಜ್ಜಿಯೊಡನೆ ವಯಸ್ಸಾದ ಅಜ್ಜಿಯೊಡನೆ ಇರುವುದಕ್ಕೆ ಊರಿಗೆ ಹೊರಟವನು, ಅಜ್ಜಿಗೆ 86 ದಾಟಿರಬೇಕು. ಈ ವರ್ಷ ಸಣ್ಣಗೆ ಸಣ್ಣಗೆ ಅವಳ ಆಗುತ್ತಿರುವ ದೇಹ ಯಾಕೊ ಬಹಳ ನೋವುಂಟುಮಾಡುತ್ತದೆ. ಈಗೀಗ ಕೆಲವೊಂದು ಸಲ ಆಫೀಸಿನ ಕೆಲಸದ ನಡುವೆಯೋ ಥಕ್ಕನೆ ನೆನಪಾಗಿ ಬಿಡುತ್ತದೆ. ಬರೀ ಎಲುವು ಎಲುವು ಎಲ್ಲಿ ಆಗಿಬಿಡುತ್ತದೊ. ಅನಿಸಿ ಹೇಗ್ಹೇಗೊ ಆಗುತ್ತದೆ. ಅವಳಿಗೆ ಮತ್ತಾವ ರೋಗ ರುಜಿನ ಕಾಡದಿರಲಿ ಎಂದುಕೊಳ್ಳುತ್ತೇನೆ. ಅವಳು ಒಮ್ಮೆ ಹೊರಟು

ಹೋದರೆ ನನಗೆ ಏನೇನು ಆಗಬಹುದು....ಓ....ಹಾಂ.... ಈ ಸಲ ಅದಕ್ಕೇ ರಜೆಯು ಬಹಳಷ್ಟು ದಿನ ಅವಳ ಹತ್ತಿರವೇ ಕಳೆಯಲು ಬಂದಿದ್ದೇನೆ. ಅವಳಿಗೆ ಏನೂ ಕೆಲಸ ಹಚ್ಚಬಾರದು, ಎಲ್ಲ ನಾನೇ ಮಾಡಬೇಕು, ಅವಳಿಗೆ ಬೇಸರವಾಗದ ಹಾಗೆ ಜೊತೆ ನೀಡಬೇಕು........ಇಷ್ಟೆಲ್ಲ ಅಂದುಕೊಂಡು ಬಂದವನ ತಲೆಯಲ್ಲಿ ಈ ಪಿಯೂ ಇಷ್ಟೆಲ್ಲ ಆಕ್ರಮಿಸಿದ್ದು ಯಾಕೆ ?

ಅಂತೂ ಊರು ತಲುಪಿತು, ರಾತ್ರಿ ಊರು ಮಲಗಿಕೊಂಡು ಆಗಿತ್ತು. ಬೀದಿ ದೀಪಗಳು ಅಲ್ಲೊಂದು ಇಲ್ಲೊಂದು ಅಜ್ಜಿ ಗಾಢನಿದ್ರೆಯಲ್ಲಿದ್ದಳು. ನಾನು ಬಂದುದನ್ನ ನೋಡಿ ಅವಳಿಗೆ ಆಶ್ಚರ್ಯವಾಯಿತು. ಖುಷಿಯಾಯಿತು. ನಾನು ಊಟಗೀಟ ಏನೂ ಬೇಡವೆಂದೆ, ಹಾಗೇ ಮಲಗಿಕೊಂಡೆ........ಅಜ್ಜಿಯನ್ನ ನೋಡಿದ ನೆಮ್ಮದಿ ನಿದ್ರೆ ಬೇಗನೆ ಬರಲಿಲ್ಲ........ಸುಖದ ಸಮಯದಲ್ಲಿ ಒಮ್ಮೊಮ್ಮೆ ನಿದ್ರೆ ಬರುವುದಿಲ್ಲ.

ಮರುದಿನ ಬೆಳಿಗ್ಗೆ ಬೇಗ ಎಚ್ಚರವಾಯಿತು. ಊರಲ್ಲಿ ಕೆಲಸವಾದರೂ ಏನು, ಅಜ್ಜಿಯ ಮನೆಯ ಕೆಲಸ ಒಂದಿಷ್ಟು, ತರಕಾರಿ ಅದು, ಇದು ಎಂದು ಪೇಟೆಗೆ ಹೋಗಿ ಬರುವುದು....ಕಸ ಉಡುಗುವುದು....ಆಯಿತು....ಪುಸ್ತಕಓದುವುದು ಈ ಸಲ ಒಂದು ದಪ್ಪನೆಯ ಪುಸ್ತಕವನ್ನೆ ತಂದಿದ್ದೆ.... ಹೀಗೆ ರಜೆಯ ದಿನಗಳು ಶುರುವಾದವು.

' ಜವಾಕುಡಿಯುವಾಗ ಬಾಯಿಗೆ ಬಂತು ಈಗ ಪಿಯೂ ಏನ ಮಾಡತಾನ ' ಅಜ್ಜಿ ಹೇಳಿದಳು ' ಭಾಳ ಸೊರಗ್ಯಾನ, ತಾನ ಅಡಗೀ ಮಾಡಕೋತದ, ಮಧ್ಯಾಹ್ನದವರೆಗು ಅವನು ಮನೆಯ ಹತ್ತಿರ ಸುಳಿಯಲೇ ಇಲ್ಲ. ಮನೆಯಲ್ಲೇ ನಿಂತು ಅವನ ಮನೆಯ ಕಡೆನೋಡಿದೆ ಒಮ್ಮೆಯೂ ಹೊರಗೆಕಾಣಿಸಲಿಲ್ಲ. ಸಂಜೆಯೂ ಆಯಿತು. ನಾನು ಹೊರಗೆ ತಿರುಗಾಡಲಿಕ್ಕೆ ಹೋದವನು ಬರುವಾಗ ನೋಡದೆ, ಬಾಗಿಲು ಓರೆಯಾಗಿ ತೆರೆದುಕೊಂಡಿತು....ಮಾತಾಡಿಸೋಣವೇ....ಆ ಮೇಲೆ ಬಂದೇ ಬರುತ್ತಾನಲ್ಲ ಅಂದುಕೊಂಡು ಮತ್ತೆ ಹಾಗೆಯೇ ಬಂದೆ. ರಾತ್ರಿ ಬೇಗ ನಿದ್ರೆ ಬಂತು. ಮರುದಿನ ಅಜ್ಜಿ ಹೇಳಿದಳು. ಪಿಯೂ ಬಂದಿದ್ದನಂತೆ. ರಾತ್ರಿ ಎಷ್ಟೋತ್ತಿನ-ವರೆಗೆ ಕುಳಿತುಕೊಂಡಿದ್ದನಂತೆ ಬರುವಾಗ ಬರೀ ಅವನದನ್ನೇ ತಲೆಯಲ್ಲಿ ತುಂಬಿಕೊಂಡವನು, ಈಗ ಅವನನ್ನಯಾಕೆ ನಾನೇ ಭೇಟಿಯಾಗುತ್ತಿಲ್ಲ ನನ್ನಲ್ಲೇ ಜೂಟಾಟಿಕೆ ನಡೆಯುತ್ತದೆ. ನನ್ನ ತವಕಗಳಲ್ಲಿ ನಿಜವಾಗಿ ಇರುವದಾದರು ಏನು,

ಬರಿ ಕಾಮುವಷ್ಟೇಯೆ, ಅದು ಜೀವನದಲ್ಲಿನ ತುಂಬ ತೀವ್ರವಾದ ಸಂಗತಿಯೇ ಅಲ್ಲ–ವೇನು ಇಲ್ಲ ನನ್ನ ಮನಸ್ಸು ಬರೀ ಅಲ್ಲಿಯೇ ಸುಳಿಯುತ್ತಿದೆ. ಅದಕ್ಕೇ ಒಂದು ಬಗೆಯ ಕಳ್ಳತನ ಕಾಡುತ್ತಿದೆ ನಾನಾದರೂ ಏನು ಮಾಡಲಿ ಅದು ಹಾಗಿದೆ, ಅಂದರೆ ಇದು ವಿಠ್ಠು ನನ್ನ ನೋಡುತ್ತಿರುವುದಲ್ಲವೇ ಅಲ್ಲ.... ನನ್ನನ್ನೇ ನೋಡುತ್ತಿರುವುದು.... ಛಿ.... ಏನೋ.... ಒಂದು....

ಆಮೇಲೆ ಮಧ್ಯಾಹ್ನ ಅವನು ತನ್ನ ಮನೆಯ ಕಟ್ಟೆಯಮೇಲೆ ನಿಂತದ್ದನ್ನ ನೋಡಿದೆ. ಗಡ್ಡ ಬೋಳಿಸಿರಲಿಲ್ಲ, ಅವನು ಬೋಳಿಸಿದ್ದಾದರೂ ಯಾವಾಗ ! ಯಾವಾಗಲೂ ಹಾಗೆಯೇ, ಅದೇ ದಪ್ಪ ಬಿದ್ದು ಹೋಗಿದೆ ಅವನಿಗೆ ನಿಂತು ಪ್ಯಾಂಟ್ ವಸ್ತ್ರ–ಮುರಿಯುತ್ತಿದ್ದ, ಇಳಿದು ಹೋದವರ ಹಾಗೆ ಕಾಣಿಸಿದ.

ರಾತ್ರಿ ನಾನು ಪುಸ್ತಕ ಓದುತ್ತ ಕೂತಾಗ ಮನೆಗೂ ಬಂದ. ನಿನ್ನೆ ಬಂದಿಯಂತಲ್ಲೊ ಅಂದ. ಹೂಂ ಅಂದೆ. ನಮ್ಮಪ್ಪ ಹೋಗಿ ಬಿಟ್ಲಪ ಹೂಂ ಕೇಳಿದೆ....ಪುಣ್ಯಾತ್ಮಕ್ಕೆ ಏನು ಬ್ಯಾನಿ ಬ್ಯಾಸರಿಕೆ ಬರಲಿಲ್ಲಬಿಡೂ, ಹೌದು ಅದೊಂದ ಛಲೋ ಆತು, ಆದ್ರ ಆಕೀಗೆ ಮುಂಜಾನೆ ಗೊತ್ತಾಗಿ ಬಿಟ್ಟಿತ್ತ ನೋಡು........ ಅದೇ Misterious ಸಂಗತಿಯ ಕುರಿತು ಹಿಂದೆ ಮಾತನಾಡುತ್ತಿದ್ದ ಅವನದೇ ಸ್ಟೈಲಿನಲ್ಲಿ ಪ್ರಾರಂಭಿಸಿದ.

ಈ Misterious ಸಂಗತಿಕೇಳುತ್ತ, ಈಗಾಗಲೇ ಕೇಳಿದ್ದರೂ ಮತ್ತೊಮ್ಮೆ ಹೊಸದಾಗಿ ಕೇಳುವವರಹಾಗೆ ಎಲ್ಲ ಮರೆತು ಕೇಳುತ್ತಕುಳಿತೆ.

ವಿಠ್ಠುನ ಜೀವನದ ಮೇಲೆ ಇಂಥದ್ದೂ ಗಾಢ ಪರಿಣಾಮ ಬೀರಬಹುದು ಯಾರಿಗೆ ಗೊತ್ತು, ಅದೂ ಅವನ ಅಪ್ಪ, ಜೊತೆಗೇ ಇದ್ದು ಈಗ ಒಂಟಿಯಾಗಿ ಮಾಡಿ ಹೋದವಳಲ್ಲಿಯೇ ನಡೆದದ್ದು.... ಖಂಡಿತ ಪರಿಣಾಮ ಮಾಡಬಹುದು.... ರಾತ್ರಿ ನನಗೆ ಇದೇ ಯೋಚನೆ ತುಂಬಾ ಹೊತ್ತು ಸುಳಿಯಿತು.

ನಾನು ಇರುವಷ್ಟು ದಿನಗಳು ವಿಠ್ಠು ನನ್ನ ನೋಡುವ ನನ್ನ ಕಣ್ಣು–ಗಳಲ್ಲಿ ಸಂಶಯಗಳು ಇದ್ದವು, ಕುತೂಹಲಗಳು ಇದ್ದವು. ಯಾವುದೇ ಗಾಂಭೀರ್ಯ–ವಿಲ್ಲದ ಸಾದಾ ನೋಟಗಳೂಇದ್ದವು.

ಹೂಂ....ಇವನು ಯಾವಾಗಾದರು ಚಟ ಮಾಡಿರಬಹುದೆ ? ಇಂಥ ವಿಚಾರಗಳೂ ಬಂದವು. ಆಗೆಲ್ಲ ಇಂಥ ಮಾತುಗಳು ಖುಲ್ಲಾನೇ ನಡೆದಿದ್ದ ನೆನಪು ಮತ್ತೇನ ಮಾಡೂದು, ಚಟಾ ತೀರಿಸಿಗೊಂಬೂದು ಇದಕ್ಯಾರ ಹೆಣ್ಣು

ಕೋಡುತ್ತಾರ, ನೀ ಮದುವಿ ಮಾಡಕೊಂಡ್ರ ನಿಂದ ನೀನ, ಉಣ್ಣದು, ನನ್ನ ಮುಂದ ಬರಬ್ಯಾಡ ಅಮ್ಯಾಲ. ವಿಠ್ಠೂ ಬೀಟ್ಟಾ ಸೇದುವ ಚಟವೊಂದನ್ನ ಬಿಟ್ಟರೆ ಮದುವೆಯಾದವರು ದಾರಿಯಲ್ಲಿ ಹೋಗುವಾಗ ನೋಡುವುದು, ಅವರ ಬಗ್ಗೆ ಮಾತನಾಡುವದು ಹುಡಗಿಯರನ್ನ ಆಗಾಗ ನೋಡುವುದು ಇಷ್ಟು ಬಿಟ್ಟರೆ ಬೇರೆ ಮಾಡಿದ ಗಂಡಸಲ್ಲ. ನನಗೆ ಖಾತ್ರಿಯಿದೆ, ಅವನಿಗೆ ಹೆಂಗಸಿನ ಚಟಮಾಡುವ ಧೈರ್ಯವೇ ಇಲ್ಲ ಅಲ್ಲಾ.... ಮನೆಯ ಕೆಲಸಮಾಡುವುದು.... ಬೇಸರದಿಂದ ಕೂಡುವುದು.... ಅಲ್ಲಲ್ಲಿ ಅಡ್ಡಾಡುವುದು.... ಹಾಂ, ಅಂದಹಾಗೆ ಊರಲ್ಲಿ ದೇವರ ಉತ್ಸವ, ಕಿರ್ತನೆಯಂಥದು ನಡೆದಾಗ ಬಹಳಷ್ಟು ಸಮಯ ವಿಠ್ಠೂ ಅಲ್ಲಿ ಕಳೆಯುತ್ತಾನೇ ಅನ್ನುವುದು ನಿಜ, ಪ್ರಕ್ಕಟಿಯಾಗಿ ಅಲ್ಲಿ ಊಟದ ಕೆಲಸವಾಗುತ್ತದೆ ಎನ್ನುವುದಾದರೂ ಅದಕ್ಕಿಂತಲೂ ಹೆಚ್ಚಿಗೆ ಏನೋ ಇರುವ ಹಾಗೆಯೂ ಅನಿಸುತ್ತದೆ. ಊರಲ್ಲಿ ಸ್ವಾಮಿಗಳು ಯಾರಾದರು ಬಂದರೆ, ಬಿಡಾರ ಹೂಡಿದರೆ ವಿಠ್ಠೂ ತುಂಬಾ ಮಾತನಾಡುತಾನೆ, ಅಲ್ಲಿಲ್ಲ ಕಸಗೂಡಿಸುವಂಥ ಕೆಲಸವನ್ನೂ ಮಾಡಿ ಬರುತ್ತಾನೆ ಹಾಂ.... ಇಂಥವೇ ಸಂಗತಿಗಳಿಂದ ಬದುಕು ತುಂಬಿಕೊಳ್ಳಬಹುದಲ್ಲ ? ಹಾಂ.... ಈಗ ಅಪ್ಪನ ಸಾವು ಅಗಲಿಕೆಯ ನೋವು, ತಾನೂ ಒಂದೊಮ್ಮೆ ಸಾಯಬೇಕಾಗಿರುವದು.... ಎಲ್ಲಕ್ಕೂ ಮುಖ್ಯ ಅವಳ ಕೊನೆಯ Misterious ಗಳಿಗೆಗಳು ಇವೆಲ್ಲ ಗಾಢವಾಗಿ ಆಕ್ರಮಿಸಲೂಬಹುದು.... ನನಗೆ ತಟಕ್ಕನೆ ನಮ್ಮ ಆಫೀಸಿನಲ್ಲಿ 50ರ ಅಂಚಿನಲ್ಲಿರುವ ಅಧಿಕಾರಿಯೊಬ್ಬರು ಇತ್ತೀಚಿಮದುವೆಯಾದದ್ದು ನೆನಪಾಗುತ್ತದೆ. ನಾನಿರುವಷ್ಟು ದಿನ ಆಗೀಗ ವಿಠ್ಠೂ ಬಂದು ಹೋಗಿ ಮಾಡಿದ ಮಾತನಾಡಿದ, ಸುಮ್ಮನೆ ಕುಳಿತ ಅಂತೂ ಗಟ್ಟಿಯಾಗಿಯೇ ಇದ್ದ ಅನಿಸಿತು.

ನಾನು ಮರುದಿನ ಬೆಳಗ್ಗೆ ಹೋಗಬೇಕು, ಅಜ್ಜಿಗೆ ಬೇಸರವೆನಿಸುತ್ತದೆ.... ಮತ್ತೆ ನಾನು ಬರುವುದೇ ಇನ್ನೂ 5–6 ತಿಂಗಳು.... ಹೌದು, ನನಗೂ ಅನಿಸಿ ಬಿಡುತ್ತದೆ. ನಮ್ಮ ಹೊಟ್ಟೆ, ಬಟ್ಟೆ, ಅಸಕ್ತಿಗಳು ಅಗತ್ಯೆಗಳು ಎಲ್ಲ ಅನಿವಾರ್ಯವಾಗಿ ನಮ್ಮನ್ನ ಅಮಾನವೀಯರನ್ನಾಗಿಸಿ ಬಿಡುತ್ತಾವಲ್ಲಾ........

ಇಷ್ಟೆಲ್ಲ ಅಂದುಕೆಕೊಂಡವನ ಹಿಂದಿನ ದಿನವೇ ಅಪ್ಪ, ಅಜ್ಜಿಯ ಜೊತೆಗಿರಲು ಒಂದುದರಿಂಲೋಏನೋ ಸ್ವಲ್ಪ ನಿರಾಳವೆನಿಸಿ ನಿದ್ರಿಸಿದೆ.... ನಸುಕಿನಲ್ಲಿ ಹೆಂಡತಿಯ ನೆನಪಾಯಿತು....ಮೈಯಲ್ಲಿ ಕಾವು ತುಂಬಿಕೊಂಡಹಾಗೆ.... ಬೆಳಗ್ಗೆ ಬಸಸ್ಟ್ಯಾಂಡಿಗೆ ಬಂದಾಗ ಜೊತೆಯಲ್ಲಿ ವಿಠ್ಠೂನೂ ಬಂದ.

ಬಸ್ಸಿನಲ್ಲಿ ಕುಳಿತೆ, ಬಸ್ಸು ಹೊರಟಿತು, ಕೈ ಮಾಡಿದೆ, ವಿಠ್ಠೂ ಕೈ ಮಾಡಿದ, ನಕ್ಕ ನನಗೆ ನಗೆ ತುಂಬಾ ತುಂಬಾ ಹಿಡಿಸಿತು. ಅವರಲ್ಲಿ ಏನೇನೋ ಅಳವಾದದ್ದಿದೆ ಅನಿಸಿತು, ಅಥವಾ ನನಗೆಲ್ಲೋ ಸಮಾಧಾನ ಹೇಳುವ ಹಾಗೇ ಆದಿತ್ತು, ಇಲ್ಲಾ. ವಿಚಿತ್ರವೇ ಎನಿಸುತ್ತದೆ. ಈ ನಗೆಗಳನ್ನ ಹೀಗೇ ಎಂದು ಅಳೆಯಲಾಗುವದಿಲ್ಲ, ನಮ್ಮ ಬೊಗಸೆಗಳಲ್ಲಿ ಹಿಡಿಯುವಷ್ಟನ್ನ ಹಿಡಿಯ ಬಲ್ಲೆವು ನಾವು.

● ಸೂಗಣ್ಣ ಹುಂಡೇಕಾರ

---

## ಹೊ

ಸಗರನಾಡಿನ, ಸಾಹಿತ್ಯ, ಸಂಸ್ಕೃತಿಯ ಸಿರಿಯ
ಸಂಪದದ ಸಾಲಂಕೃತ ಮಂಟಪವೇ "ಹೊಸ-ದಿಕ್ಕು"
ಸೊರಗಿದ ಕೊರಗಿದ ಸಾಹಿತ್ಯದಾಗಸದಿ
ಸೌರಭವ ಬೀಸುತ ಸಾಗಲಿ ನಮ್ಮ ನಗಿಸಿ ತಾನೂ ನಕ್ಕು

## ಸ

ಪ್ರಾಯಂ ಕೂಸಾದೊಡೆ ಅಭಿಪ್ರಾಯಂ ಕೂಸಕ್ಕುಮೆ
ಎನ್ನುವ ವರ ಕವಿ ರನ್ನನ ಮಾತೇ ಇದಕೆ ಬೇರು
ಪತ್ರಿಕೆಯ ನಡೆಸಿಯೇ ತೀರುವೆವು ಎಂಬ
ಛಲದಂಕ ಮಲ್ಲರಿರಲು ಬರದು ಎಂದೆಂದು ಏರು ಪೇರು

## ದಿ

ಸಾಹಿತ್ಯದ ಆಗಸದಿ ಮೂಡಿ ಬಂದಿದೆ ಇಂದು
ಶಹಾಪುರದ ಪುಣ್ಯ ನಾಡಿನಿಂದ ಧ್ರುವತಾರೆ
ಹಿರಿ ಕಿರಿಯ ಕವಿಗಳಿಗೆ, ಲೇಖಕರಿಗೆ, ವಾಚಕರಿಗೆ
ಹೊಸ-ದಿಕ್ಕು ಕಾಣಿಸಲಿ ದಾರಿಯೂ ತೋರಿ

## ಕ್ಕು

ಹಳೆ ಬೇರು ಹೊಸ ಚಿಗುರು ಎನ್ನುವಂತೆ
ಬಾಲ, ಯುವ ವಯೋವೃದ್ಧ ಸಾಹಿತಿಗಳ ವಿಚಾರಗಳ ಸಂಗಮವು
ನೋಡಲು ಬಲು ಅಂದ, ಓದಲು ಆನಂದ
ಇದರ ಪ್ರತಿಯೊಂದು ಪುಟವು ಹೃದಯಂಗಮವು

ಎಚ್. ಎನ್. ಕಮತಗಿ

## ಕೋರಿಕೆ

ಹೊಸ ವರುಷಕ್ಕೆ
ಹೊಸತನ ತಂದು
ಹರ್ಷವ ನೀಡಲಿ 'ಹೊಸ ದಿಕ್ಕು'

ರಸಿಕ ಓದುಗರ
ತೃಷೆಯನು ಹಿಂಗಿಸಿ
ಖುಷಿಯನು ಪಡಿಸಲಿ 'ಹೊಸ ದಿಕ್ಕು'

ಭಾಷೆಯು ಬೆಳೆಸಲಿ
ದ್ವೇಷವ ಅಳಿಸಲಿ
ದೋಷವ ತಿದ್ದಲಿ 'ಹೊಸ ದಿಕ್ಕು'

ಶಾಂತಿಯು ಬೆಳೆಸಲಿ
ಕಾಂತಿಯು ತಳೆಯಲಿ
ಸಂತಸದಿಂದಲಿ 'ಹೊಸ ದಿಕ್ಕು'

ಕನ್ನಡ ತಾಯಿಯು
ಚಿನ್ನ ಮುಕುಟದ
ಕಣ್ಮಣಿಯಾಗಲಿ 'ಹೊಸ ದಿಕ್ಕು'

ಸರುವರ ಮನವನು
ಹೀರುತ ತನ್ನೆಡೆ
ಕೀರುತಿ ಗಳಿಸಲಿ 'ಹೊಸ ದಿಕ್ಕು'

ಅರಳಲಿ ಅವಿರತ
ಬೀರಲಿ ಪರಿಮಳ
ಚಿರಾಯುಃವಾಗಲಿ 'ಹೊಸ ದಿಕ್ಕು'

● ಕೆ. ಶಶಿಕಾಂತ

## ದರ್ಬಾರಿನಲ್ಲಿ

ಬೀಸಾದ ಸಂದಿಗೊಂದಿಗಳ
ತೊಡಕುಗಳಿಲ್ಲದೇ
ಸಮುದ್ರದಗಲದ ರಾಜಮಾರ್ಗದಲ್ಲಿ
ಬಾನೆತ್ತರಕೆ ನಿಂತಿರುವ
ಜೋಡಿಗೊಡೆ ನೂರಾರು
ಕನಸುಗಳ ಅರಳಿಸುವ
ಶಿಷ್ಟತೆಯ ಫಲಕವ ಧರಿಸಿ ಕಂಗೊಳಿಸುವ
ಆ ಇಂದ್ರ ನರಮಾನವಯ ದರ್ಬಾರಿನಲ್ಲಿ,
ಲಂಚದ ಮುತ್ತು ರತ್ನಗಳಿಂದ
ನಿರ್ಮಿಸಿದಾಸನಗಳಲ್ಲಿ
ವಿರಮಿಸುತ್ತಿವೆ
ಶಿಷ್ಟತೆಯ ಹೆಸರಿನ
ಅದೆಷ್ಟೋ ಭ್ರಷ್ಟಕೀಟಗಳು,
ಗೆದ್ದು ಹೋದ ಆ ಹೊದು ಮುಖಗಳು
ಮುಗ್ಧರನ್ನೊದ್ದು ನಿದ್ದೆಗೈಯುತ್ತಿವೆ,
ಬಾರದೆ ಹೋಗುವ
ಆ ದೇವರಂಥವರಿಂದ, ವರದಾನಗಳಿಗಾಗಿ
ತಪತಪಿಸುತ್ತಾ, ನಿತ್ಯವೂ ಜಪಮಾಡುತ್ತಿವೆ,
ಜಡತೆಯಲಿ ತೊಳಲಾಡುವ ಬಡ ಜನಗಳು,
ಬೆವರು ಹರಿಸಿದವರ ಬಾಯಿಗೆ
ನೀರನ್ನು ಹಾಕದೆ,
ತಮ್ಮ ಮರದಿಂದ ತಲೆಯುತ್ತಿದ
ನೂರಾರು ಬಾರುಗಳಲ್ಲಿ
ಬೀರುವಿನಿಂದಲೇ ನಡೆಯುತ್ತಿದೆ
ಈ ಮಹಾದೇವರುಗಳಿಗೆ ಮಸ್ತಕಾಭಿಷೇಕ

ವೈಭೋಗದಲಿ ಮೆರೆಯುವ
ವೈಭವ ವರ್ಯರ ಒಲುಮೆಗಾಗಿ
ದಿಕ್ಕೆಟ್ಟು ಅಲೆಯುತಿವೆ
ಹೊಲಬು ಗೆಟ್ಟ ಆ ಪ್ರಾಣಿಗಳು
ಕೃಪೆಗಾಗಿ ಹಾಕಿದ ಅರ್ಜಿಯು ಅರ್ಪಣೆಗಾಗಿ
ಮೊದಲಾದಿಯಿಂದ ಕೊನೆಯ
ದರ್ಜೆಯ ವರೆಗೂ,
ಯಾವಮರ್ಜಿಯೂ ಇಲ್ಲದೆ
ಅರ್ಜಿಯ ಎದೆಗೆ ಚುಚ್ಚುತಿವೆ
ಲಂಚದ ಭರ್ಜಿಗಳು,
ಚೂರಾಗಿ ಹೋಗಿವೆ
ಬೇ (ಬಾ) ಡಿದ ಕನಸಿನ ಕುಸುಮಗಳು
ಮೈಯುಬ್ಬಿ ಕುಣಿಯುತಿವೆ
ಸೌಧದಲ್ಲಿನ ಕುರ್ಚಿಗಳು

---

ಬಸವರಾಜ ರುಮಾಲ

## ಎರಡು ವಚನಗಳು

ಅನುಕೂಲತೆಗಳು ಹೆಚ್ಚಾದಂತೆಲ್ಲಾ
ಆಲಸಿಗಳು ಹೆಚ್ಚಾಗುತ್ತಿರುವರಯ್ಯ!
ಗಡಿಯಾರ ಕಟ್ಟುವವರು ಹೆಚ್ಚಾದಂತೆಲ್ಲಾ
ಸಮಯಾಚಾರವಿಲ್ಲದವರು ಹೆಚ್ಚಾಗುತ್ತಿರುವರಯ್ಯ!
ಕಾನೂನುಗಳು ಹೆಚ್ಚಾದಂತೆಲ್ಲಾ
ಕಳ್ಳರು, ಕಪಟಿಗಳು ಹೆಚ್ಚಾಗುತ್ತಿರುವರಯ್ಯಾ!
ಧಾರ್ಮಿಕ ಸಂಸ್ಥೆಗಳು ಹೆಚ್ಚಾದಂತೆಲ್ಲಾ
ಅಧರ್ಮಿಗಳು ಹೆಚ್ಚಾಗುತ್ತಿರುವರಯ್ಯಾ!
ರಾಜಕೀಯ ಪಕ್ಷಗಳು ಹೆಚ್ಚಾದಂತೆಲ್ಲಾ
ರಾಜ್ಯನೀತಿ ಬಾಹಿರರೆ ಹೆಚ್ಚಾಗುತ್ತಿರುವರಯ್ಯ!
ಷಟ್‌ಸ್ಥಲ ಬ್ರಹ್ಮ ಗಂಗಾಧರ
ಇದೆಂಥ ಚೋದ್ಯ ನೋಡಾ!
ಹಕ್ಕುಗಳಿಗಾಗಿ ಹೆಣಗಾಡುವವರು ಹೆಚ್ಚಾದಂತೆಲ್ಲಾ
ಕರ್ತವ್ಯಗಳ ಮರೆತವರು ಹೆಚ್ಚಾಗುತ್ತಿರುವರಯ್ಯ!

ವಿಷ ಕೊಟ್ಟು ಕೊಲ್ಲುವವರು ಕೆಲವರಾದರೆ
ಔಷಧ ಕೊಟ್ಟು ಬದುಕಿಸುವವರು ಕೆಲವರಯ್ಯಾ
ಬಿದ್ದವನ ನೋಡಿ ನಗುವವರು ಕೆಲವರಾದರೆ
ಬಿದ್ದವನ ಮೇಲಕ್ಕೆತ್ತಿ ಸಮಾಧಾನ ಪಡಿಸುವವರು ಕೆಲವರಯ್ಯಾ
ಮನೆಗೆ ಉರಿ ಹಚ್ಚುವವರು ಕೆಲವರಾದರೆ
ನೀರು ಸುರಿದು ಆರಿಸುವವರು ಕೆಲವರಯ್ಯಾ
ಪಟ್ಟಸ್ಥಲ ಬ್ರಹ್ಮ ಗಂಗಾಧರ
ನೀನಿಲ್ಲವೆಂದು ಹೇಳುವ ನಾಸ್ತಿಕರು ಕೆಲವರಾದರೆ
ನೀನಿರುವುದು ನಿಶ್ಚಿತವೆಂದು ತಿಳಿದವರು ಬಹಳ ಜನರಯ್ಯಾ

---

ಚಂದ್ರಕಾಂತ ಕರದಳ್ಳಿ

## ಹಾವು (ಕಥೆ)

ಕೊಕ್ಕೊಡ ಕೊ .... ಕೊSS
ಎಂದು ಮುಂಜಾವಿನ ಹಳ್ಳಿ ಗಂಟೆಯ ಶಬ್ದ ಕೇಳಿ ಮಲಗಿದ ಜನ ಏಳ ತೊಡಗಿದರು. ಅರೇ ಹೊತ್ತಾಯ್ತು ಹೇಳಿ ಕೇಳಿ ಇವತ್ತು ಅಮಾಸಿ. ಮುಂಜಾನೆದ್ದು ಮೈ ತೊಳಕೊಂಡು ಅಪ್ಪನ ಗದ್ಗಿ, ಊರ ಹೊರಗಿನ ಬಸವಣ್ಣಗ ಕಾಯಿ ಒಡೆಸ್ಕೊಂಡು ಬರಬೇಕು. ಹಂಗೇ ಬರೋ ಹೊತ್ತಾಗ ತ್ವಾಟದ ಹೊಲ್ದ ಮ್ಯಾಗ ಹಾದು ಬರಬೇಕು ಎಂಬ ಕೆಲಸಗಳು ನೆನಪಾದೊಡನೆ ಲಗು-ಬಗೆಯಿಂದ ಊರ ಗೌಡನ ಮಗ ದ್ಯಾವಣ್ಣಗೌಡ ಹಾಸಿಗೆಯಿಂದ ಎದ್ದ.

ಗೌಡ ಎದ್ದು ತಂಬಿಗಿ ತಗೊಂಡು ಲಗು-ಬಗೆಯಿಂದ ಬಯಲಕಡಿಗಿ ಹೋಗೋದ್ರಾಗ ಜನ, ಊರು ಆಗಲೇ ಎದ್ದು ಬೆಳಗಿನಾ ಸೂಚನೆ ಕೊಡ್ತಾ ಇತ್ತು.
ಮನಿ ಕೆಲ್ಸದ ಕೆಳಗಿನ ಒಣೆಯ ಮಲ್ಯಾ ಬಂದು ಎತ್ತುಗಳಿಗಿ ಮೇವು ಹಾಕಿ ಗ್ವಾದಲಾಗಿನ ಸೊಪ್ಪು ಸರಿಪಡಿಸುತ್ತಿದ್ದ, ಗೌಡನ ಕಿಮ್ಮತ್ತಿಕೆಗೆ ಹೊರಳಿ ಒಂದು ಸಲಾಂ ಹೊಡೆದ ಪಾಪ! ಅದು ಅವನ ದೈನಂದಿನ ವಿಧಿ.

ಲೇ ಮಲ್ಯಾ ಜಲ್ದಿ ಕೆಲ್ಸ ಮಾಡು. ಹೊಲ್ದ ಕಡಿ ಹೋಗಿ ಅಪ್ಪನ ಗದ್ಗಿ ಪೂಜಾ ಮಾಡಿ ಕಾಯಿ ಒಡಸ್ಕೊಂಡು ಬರಮ್ಮು ಹಂಗೇ ಬಸವಣ್ಣನ ಗುಡಿಗೂ ಹೋಗಾಮು ಎಂದು ಸೂಚನೆ ಕೊಟ್ಟು ಮುಂದೆ ನಡೆದ.

ಮಾಲ್ಯಾನ ಮೈ ಒರಸುವಿಕೆಗೆ ಎತ್ತುಗಳು ಕೊರಳು ಕೊಡುತ್ತಿದ್ದವು. ಮನುಷ್ಯರಿಗಿಂತ ಹೆಚ್ಚಿನ ಮಮತೆ ಮಾಲ್ಯಾ ಕಾಣುತ್ತಿದ್ದುದು, ದನಗಳಲ್ಲಿ ಆ ಕಾರಣಕ್ಕಾಗಿ ಇವ್ನ ಬಂದ ಸಪ್ಪಳ ಕೇಳಿ ಎತ್ತುಗಳು ಎದ್ದು ನಿಂತು ತಮ್ಮ ಕೊರಳಲ್ಲಿಯ ಗೆಜ್ಜೆಯ ನಾದದಿಂದ ಮಾಲ್ಯಾನನ್ನು ಕರೆಯುತ್ತಿದ್ದವು.

ದ್ಯಾವಣ್ಣಗೌಡ ಬಂದವನೇ ತಯ್ಯಾರಾಗಿ ನಡೀಲೇ ಮಾಲ್ಯಾ ಊರ ಮುಂದಿನ ಹೊಲ್ದ ವ್ಯಾಗ ಹಾದು ಕಂಟಿ ಹೊಲಕ್ಕ ಹೋಗಿ, ಅಪ್ಪನ ಗದ್ಗಿ ಕಾಯಿ ಹೊಡ್ಕೊಂಡು ಬಸ್ಸಣ್ಣ ಗುಡಿಗಿ ಹೋಗವ್ಮು ಎಂಬ ಆದೇಶದೊಡನೆ ಎತ್ತುಗಳಿಗೆ ಮೈ ಒರೆಸುವ ಕೆಲಸವನ್ನು ಬಿಟ್ಟು ಮಾಲ್ಯಾ ಧಣಿಯೊಡನೆ ಹೆಜ್ಜೆ ಹಾಕ ತೊಡಗಿದ.

ಅಷ್ಟೊತ್ತಿಗಾಗಲೇ ಹಳ್ಳೆಂಬ ಹಳ್ಳಿ ಎದ್ದು, ಮಸೀದಿ, ದುರಗವ್ವನ ಕಟ್ಟಿ, ಪಂಚಾಯತಿ ಆಫೀಸ, ಊರ ಆಕಾಶವಾಣಿ ಕೇಂದ್ರವಾದ ಹೋಟೆಲ್ ಮುಂದು-ಗಡೆ ಕುಳಿತು ಹೊಲ—ನೆಲದ ಇಚಾರ ಬಿಟ್ಟು, ಮಳಿ ಹೋಗಿ ಬಿತ್ತು ಬೆಳಸು ಹಾಳಾಗಿ ಹ್ವಾದದ್ದು ಮರೆತವರಂತೆ ಊರ ಪಂಚಾಯತ ಹಿಡಿದು ಬೆಂಗಳೂರು ವಿಧಾನ ಸೌಧದ ಪೊಯ್ಲಿ, ಕಾಡುಗಳ್ಳ ವೀರಪ್ಪ ಇತ್ತೀಚಿನ ಹರ್ಷದ್ ಮೆಹ್ತಾ ಪ್ರಕರಣದವರೆಗೆ ಅವರವರ ಬುದ್ಧಿ ಹೈಸತವ್ಯಾಲ ಚರ್ಚಾ ನಡೆದಿತ್ತು.

ದ್ಯಾವಣ್ಣಗೌಡ ತನ್ನ ಆಳು ಮಗ ಮಾಲ್ಯಾನೊಂದಿಗೆ ಬರುವುದು ಕಂಡ ಜನ, ಮಾತುಕತೆಗಳನ್ನು ನಿಲ್ಲಿಸಿ, ಹಾದು ಹೋಗುವ ಗೌಡನಿಗೆ ಮುಜರೆ ಸಲ್ಲಿಸು-ವಲ್ಲಿ ಮುಕ್ತಾಯಗೊಂಡವು.

ಊರ ಮುಂದಿನ ಲಂಡಗ್ಯಾನ ಹಳ್ಳ ದಾಟಿ. ದೊಡ್ಡ ಆಲದ ಮರದ ಮುಂದ ಹಾದು ಹೋಗೋವಾಗ ಎಲ್ಲೋ ಕುಳಿತಿದ್ದ ಗೂಗೆಯೊಂದು ತಾಸೊತ್ತಾದ್ರೂ ವಿಕಾರವಾಗಿ ಕೂಗ್ತಾ ಇತ್ತು.

ಎನಲೇ ಮಾಲ್ಯಾ ಕಾಲ ಬದ್ಲಾತು, ನಾಗರಮಾಸಿ ಆದ ಇಪ್ಪೊತ್ತು ಮುಂದ ನಾಕs ದಿವ್ಸಕ್ಕ ಪಂಚಮಿ ಹಬ್ಬ. ಹೆಣ್ಮಕ್ಕಳ ಹಬ್ಬಲೇ ಇದು ನೆಪ್ಪಾತೇನು ಎಂದು ಗೌಡ ಕಣ್ಣು ಮಿಟುಕಿಸಿ ಕೇಳಿದ.

ಹೆಂಗ ನೆನಪಿಲ್ರಿಯಪ್ಪಾ, ನೀವು ಕೊಟ್ಟ ಖೊಬ್ರಿ ಕುಬಸ ಕಾಳವ್ವಗ ಕೊಟ್ಟು ಬಂದೀನಿ, ನನ್ನ ಗೌಡ್ರು ನನ್ನ ಮರೆತಿಲ್ಲ ಎಂದು ಭಾಳ ಖುಷಿ ಪಟ್ಳು, ಎಂದು ಉರಿದ ಗಾಯಕ್ಕೆ ಉಪ್ಪು ಖಾರ ಹಚ್ಚಿದ.

ಸುತ್ತು-ಮುತ್ತಲು ತುಂಬಿ ನಿಂತಿರುವ ಗಿಡಗಂಟಿ, ತಗ್ಗು-ದಿನ್ನೆಗಳಿಂದ ತುಂಬಿ ಬೆಟ್ಟಗಳಿಂದಾವೃತವಾದ ಆ ನೆಲ ಹಚ್ಚ ಹಸುರಿನ ತಾಣವಾಗಿತ್ತು. ಚಿಲಿಪಿಲಿ ಗುಟ್ಟುವ ಹಕ್ಕಿಗಳ ಇಂಚರ ಕೋಗಿಲೆಯ ಕೂಜನಕ್ಕೆ ಮುಂಜಾವು ಸೊಬಗಿನಿಂದ ಕೂಡಿತ್ತು. ಬಿಚ್ಚುಗಣ್ಣಿನ ಸೂರ್ಯ ಇನ್ನೂ ನೆತ್ತಿಗೆ ಬಂದಿಲ್ಲವಾದ್ದರಿಂದ ಎಳೆ ಬಿಸಿಲು ಚಿತ್ತಕರವೆನ್ನಿಸತೊಡಗಿತ್ತು.

ಮಲ್ಯಾನ ಚುರ್ರ-ಚುರ್ರ ಚಪ್ಪಲಿಯ ಶಬ್ದ ಗಾಳಿಯೊಡನೆ ತೇಲಿ, ಸಂಗೀತದಂತೆ ಮೇಳೈಸಿ, ಗೌಡನ ಮಾತಿಗೆ ಹೂಂ ಗುಟ್ಟ ತೊಡಗಿದಂತೆ ತಾಳ ಹಾಕುತ್ತಿತ್ತು.

ಆ ಮಾತು ಈ ಮಾತು ಆಡೋದರೊಳಗಾಗಿ, ಕಂಟಿ ಹೊಲದೊಳಗ ಬಂದೇ-ಬಿಟ್ಟಿದ್ದರು.

ಪೂಜಾ ತಂಬಿಗಿ, ಟೆಂಗಿನಕಾಯಿ ಹಿಡ್ಕೊಂಡು ಅಪ್ಪನ ಗದ್ದಿಗಿ ಒಳಗ ಇಳ್ದು ಪೂಜಾ ತಂಬಿಗಿ, ಟೆಂಗಿನಕಾಯಿ ಹಿಡ್ಕೊಂಡು ಅಪ್ಪನ ಗದ್ದಿಗಿ ಒಳಗ ಇಳ್ದು ಪೂಜಾ ಮಾಡಬೇಕೆಂದ ಗೌಡಗ, ಒಮ್ಮಿಂದೊಮ್ಮೆಗೆ ಉಸಿರುಗಟ್ಟಿದಂತಾಗಿ ಆ ಮುಂಜಾನೆಯ ತಂಪೊತ್ತಿನಾಗ ಕಂಪಿಸುತ್ತಾ, ಕೇಳಗೇಳದಷ್ಟೇ ತೀವ್ರವಾಗಿ ಗೌಡ ಮೇಲೇರಿ ಬಂದ.

ಲೇ ಮಲ್ಯಾ...........ಅಪ್ಪನ ಸಮಾಧಿಗಿ ಹಾವು ಸುತ್ತಿಕೊಂಡಾದಲೇ ಎಂದು ಭಯಕಂಪಿತ ಧ್ವನಿಯಿಂದ ಒಂದೇ ಉಸುರಿಗೆ ಸುದ್ದಿ ಹೊರಹಾಕಿದ

ಹೆಂಗ ಮಾಡಮ್ಮಿ ರಾಪ್ಪ, ಗದ್ದಿಯೊಳಗ ನಾ ಇಳ್ಯಾಂಗಿಲ್ಲ ಹೊರಗ ಬಂದ್ರ ನಾ ಹೊಡಿತೀನ್ರಿ ಎಂದು ಮಾತನಾಡುತ್ತಲೇ, ಬಡಿಗೆಯೊಂದನ್ನು ಹುಡುಕ ತೊಡಗಿದ ಹೊರಗೆ ಬರಬಹುದೆಂದು ಕಾದು ಕುಳಿತರು. ಇವರು ಆ ಕಡೆ ಈ ಕಡೆ ಓಡಾಡುವುದು ನೋಡಿ, ಸುತ್ತಲಿನ ಹೊಲದ ಜನರು, ಕಟ್ಟಿಗೆ ಆಯಲು ಬಂದ ಆಯಗಾರರು ಇವರ ಹತ್ತಿರಕ್ಕೆ ಬಂದು ನಡೆದ ಕುತೂಹಲವನ್ನು ನೋಡತೊಡಗಿದರು.

ಯಪ್ಪಾ ಗೌಡ ಅಪ್ಪನ ಸಮಾಧಿಗಿ ಹಾಂವs ಸುತಗೊಂಡಾದಂದ್ರ ಏನೋ ಒಳ್ಳೇದೈತಿ. ಇವೊತ್ತು ಹೇಳಿ-ಕೇಳಿ ನಾಗರಪಂಚಮಿ, ಅಪ್ಪಗ ಪೂಜಾ ಮಾಡೋದು ಏನೋ ಮರೆತ್ಯಾಂಗ ಕಾಣ್ತದ ಅದಕ್ಕ ನೆಪ್ಪ ಮಾಡ್ಯಾನ ಎಂದು ನಡು ವಯಸ್ಸಿನ

ನಾರಾಯಣಪ್ಪ ಹೇಳಿದ ಇವೊತ್ತು ಅಮಾಸಿ ಹುಂವೀಗಿ ಹೊಡ್ದು-ಗಿಡ್ದಗೀ ನೋಡು ತಾನs ಬಂದ್ಯಾನ ತಾನs ಹೋಗ್ತಾನ ಎಂದು ತನ್ನ ತೀರ್ಮಾನ ತಿಳಿಸಿಯೇ ಬಿಟ್ಟ.

ನೆರೆದ ಜನ ಹೌದೆಂದು ತಲೆಯಾಡಿಸಿ ಒಪ್ಪಿಗೆ ಸೂಚಿಸಿದರು. ಮಲ್ಯಾನ ಕೈಯಾಗಿನ ಬಡಿಗಿ ನೆಲಕ್ಕೆ ಬಿತ್ತು. ಗದ್ಲ ಕೇಳಿದಂತಾಗಿ ಹಾವು ಕೊಸರಾಡ ತೊಡಗಿತು. ಅಲ್ನೋಡು ಕರಿನಾಗರ ಆದ ಎಂದು ಅದರ ಹೆಡೆಯ ಮೇಲಿನ ಗುರುತು ನೋಡಿ ಗುರುಲಿಂಗಪ್ಪ ತೋರಿಸಿಯೇ ಬಿಟ್ಟ. ಅಬ್ಬಾs ಎಂದು ಅಲ್ಲಿ ಸೇರಿದ ಜನ ನಿಟ್ಟುಸಿರು ಬಿಟ್ಟರು.

ಇಷ್ಟರೊಳಗಾಗಿ ಸುದ್ದಿ ಹಬ್ಬಿ ಹಳ್ಳಿ ಮಂದಿ, ನಾ-ನೀ ಎಂದು ಹಾವು ನೋಡಲು ಜಮಾಯಿಸಿ ಬಿಟ್ರು. ಹಾವು ಅಲ್ಲಿಯೇ ಓಡಾಡತೊಡಗಿತು. ಹೊಡಿ-ಬೇಕೆಂದ್ರ ಅಮಾಸಿ, ಬಿಡಬೇಕೆಂದ್ರ ವಿಷ ಜಂತು ಏನು ಮಾಡಬೇಕು. ತೋಚದೆ ತಲೆಗೊಂದು ಮಾತು ಕತೆ, ಹಿಂದೆ ನೋಡಿದ-ಹೂಡದ ಹಾವುಗಳ ಪುರಾಣ ನಡೆದು ನಾಗರಮಾಸಿಯು ಆಚರಣೆ ಆ ಹಳ್ಳಿಯಲ್ಲಿ ಆಚರಿಸಿಯೇ ಬಿಟ್ಟರು.

ಸರಿ ಹೊತ್ತಾದ್ರೂ ಹಾವು ಸರಿದಾಡಲಿಲ್ಲ. ನೆರೆದ ಜನ ಹರ್ದು ಹೋಗಿ, ತಮ್ಮ ಹೊಟ್ಟೆ ತುಂಬಿಸಿಕೊಳ್ಳುವುದು ಬಿಡಲಿಲ್ಲ. ದ್ಯಾವಣ್ಣಗೌಡನ ಹೆಂಡತಿ ಮಲ್ಲಮ್ಮ ಈ ಸುದ್ದಿ ಕೇಳಿ. ಹಾವನ ಗದ್ದಿಗೆಯ ಮಾಜಲು ನೋಡಲು ಬಂದಳು. ಹೊಡಿಬ್ಯಾಡ್ರಿ ಇವೊತ್ತು ತಾನs ಬಂದಾನ ತಾನ ಹೋಗ್ತಾನ ಎಂದು ಗಂಡನಿಗೆ ತನ್ನ ತಿಳುವಳಿಕೆಯ ಬಾಣ ಬಿಟ್ಟಳು.

ನಡೀರಿ, ಇವೊತ್ತು ಪೂಜಾ ಮಾಡೋದು ಬಿಡ್ರಿ. ಇಲ್ಲಂದ್ರ ಮ್ಯಾಗ ಟೆಂಗಿನಕಾಯಿ ಹೊಡ್ದು ನೈವೇದ್ಯ ಹಿಡೀರಿ ಎಂದು ಸರಿದ ಸೀರೆಯ ಸೆರಗನ್ನು ಸರಿಪಡಿಸಿದಳು. ಮಲ್ಯಾ ತನ್ನ ಮುಖವನ್ನು ಬೇರೆಡೆ ತಿರುಗಿಸಿದ.

ಆಮ್ಯಾ ಆಗ್ಲಿ ಎಂದು ಮನೀಕಡಿ ಹೊರಟ್ರು. ಹಳ್ಯಾಗಿನ ಜನ ಎಲ್ಲಾ ಏನಾಯಿತ್ರಪ್ಪಾ, ಎಂದು ಕೇಳ ತೊಡಗಿದರು. ಎಲ್ಲರಿಗೂ ಒಂದೇ ಮಾತು ಹೇಳಿ ಗೌಡಗ ಬ್ಯಾಸರ ಆಗಿತ್ತು. ತಲಿ ಚಿಟ್ಟು ಹಿಡದಂತಾಗಿ ಕಾಳಪ್ಪ ಕಾಡತೊಡಗಿದಳು.

ಹಳ್ಳಿ ಮಂದಿಗೆಲ್ಲಾ ಗೌಡನ ಸಮಾಧಿ ಮ್ಯಾಲಿನ ಹಾವಿನ ಸುದ್ದಿಯೇ ಸುದ್ದಿ. ಹುಡುಗರಂತೂ ಎಷ್ಟು ಬೈದರೂ ಅಲ್ಲಿಯೇ ಜಮಾಯಿಸಿ ಬಿಟ್ಟಿದ್ರು, ಹೊತ್ತು ಸರಿದಂತೆಲ್ಲಾ ಎಲ್ಲರೂ ತಮ್ಮ ತಮ್ಮ ಮನಿ ಸೇರಿದ್ರು ಹಾವು ಮಾತ್ರ ತನ್ನ ಜಾಡು ಬಿಟ್ಟಿರಲಿಲ್ಲ.

ಮಲ್ಯಾನ ಕರ್ಕೊಂಡು ಗೌಡ ಊರ ಮುಂದಿನ ತ್ವಾಟದ ಮನೀಗಿ ಹ್ವಾದ. ಕಂದೀಲಿ ಬೆಳಕಿನಲ್ಲಿ ಕಾಳವ್ವ ಬೆಳಕಿನಂತೆ ಬೆಳ್ಳಗೆ ಹೊಳೆಯುತೊಡಗಿದ್ದಳು. ನೀನು ನಡೀಲೀ ಮಲ್ಯಾ, ಹೊರಗ ಮಲಕ್ಕೋ ಬಾಗಲ ಸರ್ಯಾಗ ಹಾಕ್ಕೋ ಅಂತಾ ಗೌಡಸಾನೀಗಿ ಹೇಳು ಅಂತ ಹೇಳಿ ಬೀಡಿಯನ್ನು ಇವನತ್ತ ಎಸೆದ. ಬೀಡೀಗಿ ಕಪ್ಪಿ ಕೊರೆದ ಮಲ್ಯಾ ಕತ್ತಲನ್ನು ಸೀಳಿಕೊಂಡು ಗೌಡನ ಮನಿ ದಾರಿ ಹಿಡ್ದ. ತಿರುಗಿ ಮಲ್ಯಾ ಒಬ್ಬನೇ ಬಂದದ್ದನ್ನೇ ಕಂಡ ಗೌಡ್ತೀ ಕೇಳಿಯೇ ಬಿಟ್ಟಳು. ಯಾಕ್ ನಿಮ್ ಗೌಡ ಬರಂಗಿಲ್ಲೇನು?

ಇಲ್ಲಪ್ಪಾ ಎಂದು ಮಲ್ಯಾ ವರದಿ ಒಪ್ಪಿಸಿದ. ಮದ್ವಿ ಆಗಿ ಹತ್ತು ವರ್ಷ ಆದ್ರು ಗೌಡ್ತೀಗಿ ಎತ್ತಿ ಆಡಿಸೋ ಭಾಗ್ಯ ಬಂದಿರಲಿಲ್ಲಾ. ಗೌಡನ ಚಾಳಿ ಹೊರಗು ಜಾಸ್ತಿ, ಹೀಂಗಾಗಿ ಅಳದ ಕರೇದ ನಡ್ಡೀ ಇತ್ತು.

ಹಾವಿನ ಅಂಜಿಕೆಯಿಂದಾಗಿ ಗೌಡ್ತೀ, ಮಲ್ಯಾ ಇಲ್ಲೇ ಮಲ್ಕೋ ನನಗೊಬ್ಬಾಕೀಗಿ ಅಂಜೀಕಿ ಬರ್ತಾದ ಎಂದು ಹೇಳಿದ್ಳು.

ಇಲ್ಲಪ್ಪಾ ಗೌಡ ಹೊರಗ ಮಲ್ಕ್ಯಾ ಅಂದಾನs, ನಾ ಅಲ್ಲೇ ಮಕ್ಕೊಂತೀನಿ ಎಂದ.

ಗೌಡಗೇನು ಬ್ಯಾನಿ ಅಂಜೀಕಿ ಗಿಂಜೀಕಿ ಬರೋದು ನನಗ ಎಂದು ಹೇಳಿ. ಒಳಗೆ ಕರೆದಳು. ಮಲ್ಯಾನೂ ಬಂದು ಏನು ಮಾತಾಡದೆ ಒಳಗs ಮಲಕಂಡ.

ಸರಿ ಹೊತ್ತ್ಯಾಗ ಎಚ್ಚರಾದ ಗೌಡ್ತೀ ಹುಚ್ಚಿ ಆದ್ಲು, ಅಷ್ಟವಂತನ ಹಾಡುಗಾರಿಕೆಗೆ ಮೆಚ್ಚಿ ಮೈ ಅರ್ಪಿಸಿಕೊಂಡ ಅಮೃತಮಲೆಯಂತೆ, ಮಲ್ಯಾನ ಗೊರಗೊರ ಸಪ್ಪಳ ಆಕೆಗೆ ಹಿತವೆನಿಸತೊಡಗಿತ್ತು. ನೀರವ ವಾತಾವರಣದ ಮನೆ ಒಮ್ಮಿಂದೊಮ್ಮೆಲೆ ಗೌಡ್ತಿ ಮಲ್ಯಾ ಹಾವು ಹಾವು ಎಂದಳು. ನಿದ್ದೆಗಣ್ಣಿನಿಂದ ಎದ್ದವನೆ ಮಗ್ಗಲಲ್ಲಿನ ಬಡಿಗಿ ಹಿಡ್ದು ಎಲ್ಲಾದ ಗೌಡ್ತೀ ಎಂದು ಕೇಳಿದ.

ಬಾ ಮಲ್ಯಾ ಇಲ್ಲೇ ಅದ ಬಾ ಎಂದು ಒಳಗೆ ಕರೆದಳು. ಕದ ಹಾಕಿದಳು ಮಲ್ಯಾನಿಗೆ ಏನೂ ತೋಚದಾಯಿತು........!

ಬ್ಯಾಡ ಗೌಡ್ತೀ ಬ್ಯಾಡ ಗೌಡ್ತಿ ಎಂದ್ರೂ ಇಲ್ಲಾ ನನ್ನ ಮಾಟೂಕ ಬಂದಿದ್ದ ಎಂದು ಗೌಡಗ ಹೇಳ್ತೀನಿ ನೋಡು. ಎಂದ್ಳು.... ಎರಡೂ ಮೈಗಳು ಒಂದಾದವು ಊಹಿಸದಂತೆ ನಡೆದೇ ಹೋಗಿತ್ತು. ಹಣತೆಯಲ್ಲಿ ಎಣ್ಣೆ ಬಿದ್ದು ದೀಪ ಪ್ರಕಾಶಮಾನವಾಗಿ ಬೆಳಗತೊಡಗಿತ್ತು.

ಗೌಡನ ಸಮಾಧಿ ಮ್ಯಾಲ ಜಿದ್ದ ಹಾವು ಮೂರ್‍ನಾಲ್ಕು ದಿನ ಆಗಿ. ಹದಿನೈದು ದಿನ ಸಮೀಪಸಿದ್ರೂ ಹೊರ ಬರಲಿಲ್ಲ. ಹಾಲು ಇಟ್ರೂ ಕುಡೀಲಿಲ್ಲ, ಸುತ್ತ ನಾಕು ಹಳ್ಳೀಗಿ ಸುದ್ದಿ ಹಬ್ಬಿ. ಜನ ಬಂದು ನೋಡುವುದು ನಡೆದೇ ಇತ್ತು.

ಮಗ್ಗಲ ಹಳ್ಳಿ ಮುದುಕಿ ಕನಸಿನ್ಯಾಗ ಬಂದು ಇನ್ನೊಂದು ಪಾರದಗ ಮನಸ್ಯಾನ ರೂಪ ತಾಳಿ, ಹೇಳಿಕೀ ನೀಡ್ತೀನಿ ಎಂದು ಸುದ್ದಿ ಮಾಡಿದ ಮುದುಕಿ ಯೊಬ್ಬಳು ಮತ್ತೊಂದು ಹೊಸಾ ಸುದ್ದಿ ಹಬ್ಬಿಸಿಬಿಟ್ಟಳು.

ಎಲ್ಲಿಂದೆಲ್ಲಿಗೋ ಹಬ್ಬಿದ ಈ ಸುದ್ದಿ ಹತ್ತಾರು ಹಳ್ಳಿಗಳಿಗೆ ಗೊತ್ತಾಗಿ ಜನ ಜಮಾಯಿಸತೊಡಗಿದಂತೆ ಸುದ್ದಿ ಕೇಳಿದ ಸ್ವಾಮಿಯೊಬ್ಬ ಪುರಾಣದ ಪುಸ್ತಕ ಹಿಡ್ದು ಬಂದೇ ಬಿಟ್ಟ.

ನನ್ಗೂ ಅಪ್ಪಣೆ ಆಯ್ತು ಬಂದೀನಿ ಊರೀಗಿ ಶುಭ ಅದ. ಪುರಾಣ ಹೇಳಮ್ತ್ಮ ದೇವರ ಮಹಿಮಾ ತಿಳಿಂಗಿಲ್ಲ. ಎಂದು ಹೇಳಿದಾಗ ಜನ ಹೌದ್ಹೌದು ಎಂದು ಓಟು ಹಾಕಿಯೇ ಬಿಟ್ರು.

ಪೂಜೆ ನಡ್ದು ಪುರಾಣ ಆರಂಭ ಆಗಿಯೇ ಬಿಟ್ಟಿತು. ಊರಾಗ ಪಟ್ಟಿ-ಪಳಗಿ ಸುರು ಆಗಿ, ನಾ-ನೀ ಅಂತ ಪೈಗಳ್ಳ ಖಾತೆ ಮಂದಿ ಸೇರಿ ಪರಸಾದ ಸುರು ಮಾಡಿದ್ರು. ಜೊತೆಗೆ ಭಜನಿ ಮ್ಯಾಳ ಗಾಂಜಾ-ತಂಬಾಕು ಸೇರಿ ಒಮ್ಮಿಂದೊಮ್ಮೆಲೆ ಹಳ್ಳಿಗಿ ರಂಗು ಬಂತು.

ಅಂಗ—ಹೀಂಗ ತಿಂಗಳ ತುಂಬಿತು. ಗೌಡ್ತಿಗೂ ರಂಗು ಬದಲಿಸಿತು. ವೊಯಿಕ್, ವೊಯಿಕ್ ಎಂದು ವಾಂತಿ ಮಾಡಿಕೊಳ್ಳತೊಡಗಿದಳು. ಗೌಡ್ತೀಗಿ ನಿಂತಿದ್ದು ಕೇಳಿ. ಊರ ಮಂದೀಗಿ ಖುಷಿ ಆತು, ಇದು ಎಲ್ಲಾ ನಾಗಪ್ಪನ ಮಹಿಮಾ ಎಂದು ಜನ-ಊರು ಹೇಳತೊಡಗಿದರು.

ಊರೀಗಿ ಶುಭ ಆದ ಎಂದು ಹೇಳಿದ ಸ್ವಾಮಿಯ ಮಾತು: ಹಸೀ ಗ್ವಾಡಿಗಿ ಹಳ್ಳ ಬಡ್ದಂಗಾಗಿ ಜನ ನಾ-ನೀ ಅಂತ ಸ್ವಾಮಿಗಿ ಪಂಚಾಂಗ ಕೇಳಲು ಸುರು ಮಾಡಿದ್ರು.

ಪೊರೆ ಬಿಚ್ಚಿದ ಹಾವು ಗದ್ದಿಗಿಯಿಂದ ಹೊರ ಹೋಗಿತ್ತು. ಹಸಿರು ತುಂಬಿದ ಅಡವಿಯಿಂದ ಕೋಗಿಲೆಯ ಕೂಹೂ ಕುಹೂ ಕೂಜನ ಕೇಳಿ ಬರುತ್ತಿತ್ತು.

ಶ್ರೀಮತಿ ಗಂಗಾ ರಾಜಶೇಖರ ಪಾಟೀಲ

## ಕೋಟಿ ಸೂರ್ಯರು

ಕತ್ತಲದ ನಾಡೊಳಗ
ಹಿತ್ತಲದ ಗಿಡದೊಳಗ
ಎಚ್ಚೆತ್ತು ಕೂಗಿತ್ತ
ಪುಟ್ಟ ಕೋಗಿಲೆಯೊಂದು
ಮರವೆಲ್ಲ ಚಿಗುರ್ಯಾವ
ಹೂವೆಲ್ಲ ಅರಳ್ಯಾವ
ಮೂಡಣದ ದಿಬ್ಬಕ್ಕ
ಕೆಂಪ್ಸೂರ್ಯ ಮೂಡ್ಯಾನ
ಹೊತ್ತೇರಿದ್ಹಾಂಗ
ಕುಣಿ ಕುಣಿದು ಹಾಡ್ಯಾದ
ನಾಡೆಲ್ಲ ಗುಡುಗಾಗಿ
ಮಿಂಚಾಗಿ ಸಿಡಿಲಾಗಿ
ಜೀವಸು ರಾಕ್ಷಸರ
ಬನವೆಲ್ಲ ಬರಡಾಗೋ
ಕಾಲ
ಬೆಳ್ಳಿ ಚುಕ್ಕಿಯಂತೆ
ಮೂಡುತ್ತಲಿರುವಾಗ
ಮನಸೊಂದ ಬೇತ
ಮಾಡ್ಯಾದ
ಹಾಡುವ ಕೋಗಿಲೆ
ಹಾಡುತಲೇ ಇರುವಾಗ
ಬ್ಯಾಟಿಯಾಡ್ಯಾರ ಬನದಾಗ
ಈ [illegible] ತೂಗಲಿನವರಾ
ಆಗತ್ತರೂ ಕೇಳಿಲ್ಲ
ಕರೆದರೂ ಕೇಳಿಲ್ಲ
ನಾವು ನೀವುಗಳೆಲ್ಲಾ
ಈ ಗೋಟಿಗ ಸಿಟ್ಟಿಲ್ಲ
ದೇಶ ದೇಶದೊಳಗ
ಹುಟ್ಯಾರ ಕೋಟಿ ಕೋಟಿ
ಸೂರ್ಯರುಗಳಾ ಎಲ್ಲಾ

## ಅರ್ಥವಿಲ್ಲದವರು

(ಕಥಾ ಸಂಕಲನ ಲೇ : ಶೇಖರ ಕತ್ತಿಗೆ, ಬೆಂಗಳೂರು)

ಶೇಖರ ಕತ್ತಿಗೆಯವರ ಈ ಕಥಾ ಸಂಕಲನದಲ್ಲಿ ಮೊದಲೇ (ಪತ್ರಿಕೆಗಳಲ್ಲಿ) ಪ್ರಕಟವಾದ ಕಥೆಗಳಿದ್ದರೂ, ಮತ್ತೊಮ್ಮೆ ಓದಿಸಿಕೊಳ್ಳಲು ಪ್ರೇರಣೆಯನ್ನೀ-ಯುತ್ತವೆ. ಯಾವುದೇ ಪಂಥ, ಚಳುವಳಿಗೆ ಬದ್ಧನಾಗದೇ ಲೇಖಕರು ಆತ್ಮತೃಪ್ತಿಗಾಗಿ ಸಾಹಿತ್ಯ ರಚಿಸಿ, ಅವರ ಪ್ರಾಮಾಣಿಕ ಅನುಭವಗಳನ್ನು ಹೊರಗೆಡಹಿದ್ದು ಸರ್ವವಿದಿತ.

ನಮ್ಮ ಸುತ್ತಲಿನ ಪರಿಸರದಲ್ಲಿ ಕಂಡುಕೊಂಡ ಕ್ಷಣಗಳನ್ನು ಅದರ ಹಿಂದಿರುವ ನೋವನ್ನು, ಕಥಾರೂಪದಲ್ಲಿಳಿಸಿರುವುದು ಗಮನಾರ್ಹ. ಈ ಸಂಕಲನದಲ್ಲಿ ೧೫ ಕಥೆಗಳಿದ್ದು, 'ಪಿಂಚಣಿ' ಕಥೆಯಲ್ಲಿ ಪಿಂಚಣಿಗಾಗಿ ಪರದಾಡುವ ಬೂಬಮ್ಮನ ಪಾತ್ರ 'ತಬರ'ನನ್ನು ನೆನಪಿಗೆ ತರುತ್ತದೆ.

ಕಥಾ ಸಂಕಲನದಲ್ಲಿ ಪ್ರಮುಖವಾದ ಇನ್ನೊಂದು ಕಥೆ 'ಬಲಿ ಪಶು' ಮಳೆ ಬರಿಸಲು ಬಲಿ ಕೊಡುವ ಮೂಢ ಪದ್ಧತಿಯನ್ನು ತುಂಬ ಸೊಗಸಾಗಿ ವಿಡಂಬಿಸುತ್ತದೆ. ಆಚಾರ ಹೇಳಿ ಬದನೆಕಾಯಿ ತಿನ್ನುವವರೇ ತುಂಬಿರುವುದನ್ನು ಒಂದು ಘಟನೆಯ ಸುತ್ತ ಹೆಣೆದಿರುವ ಕಥೆ "ಆಚಾರ ಹೇಳುವವರು" ಇದು ಕೂಡ ಕಷ್ಟ ಬಂದಾಗ ಜಾರಿಕೊಳ್ಳುವವರ ಮನೋಭಾವವನ್ನು ಸರಳವಾಗಿ ಬಿಂಬಿಸಿದೆ.

### ಜೀವಂತ ಶವಗಳು ಸಕ್ಕಾಗ

ದೊಡ್ಡ ಬಸಪ್ಪ ಬಳೂರಗಿಯವರಿಂದ ಸಂಪಾದಿತ ಈ ಕವನ ಸಂಕಲನವು ಹೈದ್ರಾಬಾದ ಕರ್ನಾಟಕದ ಕವಿಗಳ ಕಾವ್ಯ ಸಂಗ್ರಹವಾಗಿರುವುದು ಒಂದು ವೈಶಿಷ್ಟ್ಯ.

ಇಲ್ಲಿಯ ಹಲವಾರು ಕವನಗಳಲ್ಲಿ ದೇಶಭಕ್ತಿ ತುಂಬಿ ತುಳುಕಾಡುತ್ತಿರುವುದ-ರೊಂದಿಗೆ ಪ್ರಸ್ತುತ ಸಮಾಜದ ಡಾಂಭಿಕತನದ ವಿಡಂಬನೆಯೂ ಚಿತ್ರಿತವಾಗಿದೆ. ಯುವ ಜನಾಂಗ ಎದುರಿಸುತ್ತಿರುವ ಸಮಸ್ಯೆಗಳು, ಗಂಭೀರವಾದ ಅಂತರರಾಷ್ಟ್ರೀಯ

ವಿಷಯಗಳೂ, ಜಾತ್ಯಾತೀಯತೆ, ಸೆಕ್ಯುಲರಿಸಂ ಎನ್ನುತ್ತ ವಿಶ್ವಶಾಂತಿಗಾಗಿ ಹಾತೊರೆಯುವ ನಮ್ಮಲ್ಲೇ ಗುಂಡಿಗೆಗಳೊಂದಿಗೆ ನಡೆದಿರುವ ಗುಂಡೇಟಿನಾಟದ ವೈರುಧ್ಯ, ಇವೆಲ್ಲವೂ ಕವಿತೆಗಳಿಗೆ ವಸ್ತುಗಳಾಗಿವೆ.

ಬಸವೇಶ್ವರನಾಥ ಸೂಗೂರ ಮಠ ಅವರು ಸತ್ಯ ಹರಿಶ್ಚಂದ್ರನನ್ನು ಭೇಟಿಯಾಗುವ ಆಸೆಯಿಂದ ಆತನಿಗೆ ಮತ್ತೊಮ್ಮೆ ಬರುವಂತೆ ಕರೆ ನೀಡಿದರೆ, ದೊಡ್ಡಬಸಪ್ಪ ಬಳೂರಗಿಯವರು 'ವಿಚಾರಿಸು' ಕವನದಲ್ಲಿ ಸಾವಿತ್ರಿ ನೀ ಹುಟ್ಟಿ ಬರಬೇಡ! ಎಂದು ಸಲಹೆ ನೀಡುತ್ತ ಮುಂದೆ ಸಾಗಿ ಯಮನ ಕರ್ತವ್ಯಲೋಪವನ್ನು ಎತ್ತಿ ತೋರಿಸಿ ಯಮನು ಬೇಸತ್ತಿರಬೇಕು.

ಇಲ್ಲದಿದ್ದರೆ ಇರುತ್ತಿತ್ತೆ? ಜನಸಂಖ್ಯೆಯ ಅವಾಂತರ ಒಗ್ಗುವುದಾದರೆ ವಿಚಾರಿಸು ಎನ್ನುತ್ತಾರೆ. ಶ್ರೀ ಹೊನ್ಕಲ್ ಅವರ 'ಇಲ್ಲಿ ಜೀವಗಳು ಮಾರಾಟಕ್ಕಿವೆ' ಎಂಬುದು ಪ್ರಚಲಿತದಲ್ಲಿರುವ ಮಾನವ ಜೀವಿಯ ಮೌಲ್ಯವನ್ನು ಮಾರ್ಮಿಕವಾಗಿ ಚಿತ್ರಿಸುವ ಕವನವಾಗಿದೆ.

ಶಿವಣ್ಣ ಇಜೇರಿಯವರ 'ಯೋಧ' ಚುಟುಕಾದ್ದರೂ ಚುರುಕಾಗಿದೆ.
ಸ್ವಾತಂತ್ರ್ಯಕ್ಕಾಗಿ ಹೋರಾಡಿ ಮಡಿದವ
ಬರಿ ಯೋಧ
ಉಳಿದ ಪಿಂಚಣಿ ಪಡೆದ
ಸ್ವಾತಂತ್ರ್ಯ ಯೋಧ.

ಸುಮಾರು ೫೦ ಕವಿಗಳ ಸಂಕಲನದಲ್ಲಿ ಕೇವಲ ೪ ಜನ ಮಹಿಳೆಯರ ಕವನಗಳಿದ್ದು, ಶ್ರೀಮತಿ ಶಕುಂತಲಾ ಮನ್ನಂಗಿಯವರ ತಾಯಿ ಮಗು ಕವನದಲ್ಲಿ–ಗರ್ಭದಲ್ಲಿರುವ ಮಗುವು ತಾಯಿಯೊಡನೆ ಸಂಭಾಷಿಸಿ ಹೊರ ಜಗತ್ತಿನ ವಾಸ್ತವತೆಯನ್ನು ತಿಳಿಯಲು ಇಚ್ಛಿಸುತ್ತದೆ. ಇಲ್ಲಿಯ ವಿವರ ನೀಡುತ್ತ ತಾಯಿಯು–

ಗಂಡು ನೀನಾದರೆ
ಕೆಲಸ ಕೊಡಿಸುವ ಚಿಂತೆ
ಹೆಣ್ಣು ನೀನಾದೊಡೆ
ಮದುವೆ ಮಾಡುವ ಚಿಂತೆ—ಎನ್ನುತ್ತ ಸಮಾಜದಲ್ಲಿರುವ ಕಟು ಸತ್ಯವನ್ನು ಹೊರಗೆಡಹಿದ್ದಾಳೆ.

● ತಿಮ್ಮಯ್ಯ ಪುರ್ಲೆ

# ಮುಂಪ್ಪುರಿ

(ಕವನ ಸಂಕಲನ)

ಶಾಂತರಸ ಪ್ರಕಾಶನ
ಅಮ್ಮಾಪುರ ತಾ॥ ಸುರಪುರ
ಜಿ॥ ಕಲಬುರ್ಗಿ.

ಧರೆಪ್ಪ ನಿಡೋಣಿ
ನಬೀಲಾಲ ಅಮ್ಮಾಪುರ
ಶ್ರೀಶೈಲ ಕಾಂಬಳೆ

"ಮುಪ್ಪುರಿ" ಮೂವರು ಕವಿಗಳ ಕವನ ಸಂಕಲನ, ಧರೆಪ್ಪ ನಿಡೋಣಿ ನಬೀಲಾಲ ಅಮ್ಮಾಪುರ, ಶ್ರೀಶೈಲ ಕಾಂಬಳೆ, ಇವರ ಕವನಗಳನ್ನು ಒಳಗೊಂಡ ಸಂಕಲನ ಇವರು ಹೊಸಬರಾದರು ಕೆಲವು ಕವನಗಳು ಅನುಭವದ ಕಲ್ಪನೆ (Fancy) ಮತ್ತು ತೀವ್ರತೆಯಿಂದ ಕೂಡಿವೆ.

ಹೆಣ್ಣು ಗಂಡಿನ ನಡುವೆ ಸಂವೇದನೆಗಳು, ಸುಖ-ದು:ಖ, ಒಂಟಿತನ, ಜೀವನ ಪ್ರೇಮದ ತಲ್ಲಣ ಪ್ರತಿಭಟನೆಯ ತೀವ್ರತೆಯನ್ನೂ ಕವಿಗಳು ಕಲಾತ್ಮಕ ಕಾವ್ಯ ಲೇಪ ಮಾಡುವಲ್ಲಿ ಸೋತಿದ್ದಾರೆ. ಆದರೂ ಬಂಡಾಯದ ಬಿಸಿ ಕಾವ್ಯ ಇರುವದರಿಂದ ಸಿದ್ಧ ಮಾನದಂಡದ ಮಿತಿಯನ್ನು ದಾಟ ಬೇಕಾಗುವದು.

ಧರೆಪ್ಪ ನಿಡೋಣಿಯವರ ಕೆಲವು ಒಳ್ಳೆಯ ಕವನವನ್ನು ಇಲ್ಲಿ ಉಲ್ಲೇಖಿಸ-ಬೇಕಾಗುತ್ತದೆ. ಇವರ ಕವನದಲ್ಲಿ ದೈನಂದಿನ ಬದುಕಿನ ವೈವಿಧ್ಯಗಳ ವಾಸ್ತವ ಚಿತ್ರಣ ನೀಡಿದ್ದಾರೆ. ಅವನೆಲ್ಲಿ? ಆ ಸುಂದರ ಹುಡುಗನ ಕನಸುಗಳು ಸತ್ತು ಬಿದ್ದಿವೆ ಇಲ್ಲಿ, ನಾನು ನನ್ನ ಹೆಂಡತಿ, ಮತ್ತು ನೀರು.

ದಿನಾಲೂ ಹುಡುಕುತ್ತೇನೆ
ಅಂದಿನ ಹದಿನೆಂಟರ ಹುಡುಗನನ್ನು
ಈ ಸತ್ತ ಮನಸ್ಸಿನಲ್ಲಿ ಅವನೆಲ್ಲಿ?

ಪ್ರಸ್ತುತ ಸ್ಥಿತಿಯಲ್ಲಿ ಸಮಸ್ಯೆಗಳಿಗೆ ಯುವಕರು ತಮ್ಮನ್ನು ತಾವೇ ಕಳೆದುಕೊಂಡಿದ್ದಾರೆ ಎನ್ನುವ ಆತಂಕ ಈ ಕವನದಲ್ಲಿ ವ್ಯಕ್ತವಾಗುತ್ತದೆ ಪ್ರತಿಭಟಿಸುವ ಹುಡುಗನನ್ನು ಹುಡುಕಾಡುವ ಆಶೆಯನ್ನು ಈ ಕವನದಲ್ಲಿ ವ್ಯಕ್ತವಾಗುತ್ತದೆ.

ಇದೇ ಸಂಕಲನದಲ್ಲಿ ಎರಡನೆಯ ಕವಿ ನಬೀಲಾಲ ಅಮ್ಮಾಪುರ. ಇವರು ಕೆಲವು ಮಿತಿಗಳ ನಡುವೆ ಚಿಕ್ಕ ಚಿಕ್ಕ ಪದ್ಯಗಳನ್ನು ಉತ್ತಮವಾಗಿ ರಚಿಸಿದ್ದಾರೆ.

ಪ್ರೀತಿ ಪ್ರೇಮ ಕವನಗಳ ಜೊತೆಗೆ, ಅನ್ಯಾಯ ಮೋಸ, ಭ್ರಷ್ಟತೆಯ ಬಗ್ಗೆ ವಿಡಂಬನಾತ್ಮಕವಾದ ಕವನಗಳನ್ನು ರಚಿಸಿದ್ದಾರೆ.

ನಾಡಿನ ಚೊಕ್ಕಸ
ಪವಿತ್ರ ಖಾದಿಯು
ಮರೆಯಲ್ಲಡಗಿದ ಪುಡಾರಿಯ
ಗುಡಾಣದಂತಹ ಹೊಟ್ಟೆ.

ಕವಿಯ ದೃಷ್ಟಿಯಲ್ಲಿ ಜನರ ಸಂಪತ್ತು ನಮ್ಮ ನಾಯಕರಂ ಮಾಡುತ್ತಿರುವ ದುಂದು ವೆಚ್ಚದ ಬಗ್ಗೆ ವಿಡಂಬನೆ ಮಾಡಿದ್ದಾರೆ. ಸತ್ಯ ಹರಿಶ್ಚಂದ್ರ, ತ್ರಿಕಾಲ ಜ್ಞಾನಿ ಮ್ಯಾಬ್‌ಲೈಟ್ ಕುರಿಗಳ ಹಬ್ಬ, ಇವು ಓದ ಬಹುದಾದ ಕವನಗಳು.

ಶ್ರೀಶೈಲ ಕಾಂಬಳೆಯವರು ಮೂಲ ಬಂಡಾಯದ ಧ್ವನಿ, ಕೆಳವರ್ಗದವರ ಬದುಕಿನ ಸಮಸ್ಯೆಗಳ ಬಗ್ಗೆ ತಮ್ಮ ಕವನದಲ್ಲಿ ಬಿಂಬಿಸಿದ್ದಾರೆ.

ಧರ್ಮ ದೇವರುಗಳ ಹೆಸರಲ್ಲಿ
ಕರ್ಮ ಸಿದ್ಧಾಂತದ ನೆಪದಲ್ಲಿ
ನಿರ್ಮಲ ಮನದ ನಮ್ಮ ಅಕ್ಕ-ತಂಗಿಯರನೆಲ್ಲ
ಧಾರ್ಮಿಕ ದೇವದಾಸಿಯರನ್ನಾಗಿಸಿ
ಚರ್ಮ ಚಟಗಳ ತೀಟೆಗೆ ಅವರನ್ನೆಲ್ಲ ಬೆತ್ತಲೆ ಗೊಳಿಸಿ.
ಮರ್ಮಾಂಗಗಳ ನೋಡಿ ಖುಷಿಪಟ್ಟ
ಕು-ಕರ್ಮಿ ಖಳ ಧರ್ಮಿಗಳ,
ಕತ್ತಿನ ಪಟ್ಟ ಹಿಡಿದು
ಪ್ರಶ್ನೆ ಕೇಳುತ್ತೇವೆ.

ಎನ್ನುವ ಕವಿ ಸಮಾಜದಲ್ಲಿಯ ಅನ್ಯಾಯದ ಪಟ್ಟಿಯನ್ನು ಈ ಕವನದಲ್ಲಿ ಹಿಡಿದಿಟ್ಟಿದ್ದಾರೆ. ಈ ಸಂಕಲನ ಹೊರ ತಂದ ಮೂರು ಜನ ಕವಿಗಳು ಹೊಸಬರಾದುದರಿಂದ ಸಿದ್ಧಮಾನದಂಡದಿಂದ ಇಲ್ಲಿಯ ಕವನಗಳನ್ನು ಅಳೆಯುವದಕ್ಕಿಂತ ಕೆಲವು ಮಿತಿಯಲ್ಲಿ ನೋಡಬೇಕಾಗುವದು ಆದುದೂ ಕೆಲವು ಓದಲೇ ಬೇಕಾದ ಕವನಗಳನ್ನು ಕೂಡ ಈ ಸಂಕಲನದಲ್ಲಿ ಇವೆ. ಈ ಸಂಕಲನದಲ್ಲಿ ಮುನ್ನುಡಿ, ಬೆನ್ನುಡಿ, ಸ್ವಲ್ಪ ಅತಿರೇಕವಾಗಿ ಕಾಣುತ್ತದೆ. ಈ ಕವಿಗಳು ಇನ್ನೂ ಮುಂದಿನ ದಿನಗಳಲ್ಲಿ ಒಳ್ಳೆಯ ಕವನಗಳು ರಚಿಸುವರೆಂಬ ಆಶೆ ಕೂಡ ಈ ಸಂಕಲನದಲ್ಲಿ ಮೂಡಿಸಿದ್ದಾರೆ. ●

## ಈ ಸಂಚಿಕೆಯ ಲೇಖಕರ ವಿಳಾಸಗಳು


* ಸಿದ್ಧರಾಮ ಹೊನ್ಕಲ್, 'ಹೊಸ ದಿಕ್ಕು' ದಿಗ್ಗಿ ಬಿಲ್ಡಿಂಗ್, ಶಹಾಪೂರ-೫೮೫೨೨೩
* ಡಾ॥ ರಹಮತ ತರೀಕೆರೆ, ಕನ್ನಡ ವಿ. ವಿ. ಹಂಪಿ (ಬಳ್ಳಾರಿ ಜಿಲ್ಲೆ).
* ಡಿ. ಜಿ. ಬಳೂರಗಿ, ಸ. ಪ. ಪೂರ್ವ ಕಾಲೇಜು, ಭೀಗುಡಿ, (ಶಹಾಪೂರ).
* ಶಂಕರ ಪಾಟೀಲ, ಕಲಾಭವನ ವಿದ್ಯಾನಗರ, ದಾವಣಗೆರೆ (ಚಿತ್ರದುರ್ಗ ಜಿಲ್ಲೆ).
* ವೀರಪ್ಪ ಪಾಟೀಲ, ಅಂಚೆ : ಹಿರೇಕೊಟ್ನೆಕಲ್, ತಾ॥ ಮಾನ್ವಿ ರಾಯಚೂರ ಜಿಲ್ಲೆ
* ಡಾ॥ ಅರವಿಂದ ಮಾಲಗತ್ತಿ, ಮಂಗಳ ಗಂಗೋತ್ರಿ. (ದ. ಕ.)
* ಕೆ. ಎಂ. ಮುನಿಕೃಷ್ಣಪ್ಪ ೩೯೫, ೧ನೇ ಮಹಡಿ, ೯ನೇ ಮುಖ್ಯ ರಸ್ತೆ, ಹನುಮಂತ ನಗರ, ಬೆಂಗಳೂರ-೧೯.
* ಪಿ. ಕೆ. ಏಕಬೋಟೆ, ಅಂಚೆ : ಗೋಗಿ ತಾ॥ ಶಹಾಪೂರ (ಕಲಬುರ್ಗಿ ಜಿಲ್ಲೆ).
* ಪ ಭು ಖಾನಾಪುರೆ, ಎಲ್.ಐ.ಜಿ. ಕ್ವಾಟ್ರರ್ಸ್, ಬಡೇಪೂರ ಕಾಲನಿ, ಗುಲ್ಬರ್ಗಾ.
* ಸೋಮಶೇಖರ, ಕೋಲಾರ ಸಂ. ೧೦೭೪/೧, ಕೋಟೆ, ಕೋಲಾರ-೫೬೩೧೦೧.
* ಕು. ತುಮಕೂರ ಭಾರ್ಗವಿ, "ಮೇಘ ವರ್ಷಿಣಿ" ೮ನೇ ತಿರುವು, ಎಸ್. ಐ. ಟಿ. ಬಡಾವಣೆ, ತುಮಕೂರ-೫೭೨೧೦೩.
* ಶ್ರೀಮತಿ ವಿಜಯಲಕ್ಷ್ಮಿ ಕೆ. ಹಂಗರಗಿ, ಚರ್ಚ ಹತ್ತಿರ, ಶಹಾಪೂರ-೫೮೫೨೨೩.
* ಡಾ॥ ಆನಂದ ಪಾಟೀಲ, ಆಕಾಶವಾಣಿ ನಿಲಯ, ಗುಲಬರ್ಗಾ.
* ಸೂಗಣ್ಣ ಹುಂಡೇಕಾರ, ಅಂಚೆ : ಯಾದಗೀರ (ಗುಲಬರ್ಗಾ).
* ಎಚ್. ಎನ್. ಕಮತಗಿ, ಎಸ್.ಬಿ. ಎಚ್. ಹತ್ತಿರ, ಅಂಚೆ ; ರಂಗಂಪೇಟ, ತಾ॥ ಸುರಪೂರ.
* ಕೆ. ಶಶಿಕಾಂತ, ಕಸಬಾ ಲಿಂಗಸೂಗೂರ, (ರಾಯಚೂರ ಜಿಲ್ಲೆ).
* ಬಸವರಾಜ ರುಮಾಲ, ಶಿಕ್ಷಕರು, ತಿಮ್ಮಾಪೂರ, (ರಂಗಂಪೇಟ) ತಾ॥ ಸುರಪೂರ
* ಶ್ರೀಮತಿ ಗಂಗಾ ರಾಜಶೇಖರ ಪಾಟೀಲ, ಅಂಚೆ : ಭಂಕೂರ ತಾ॥ ಚಿತ್ತಾಪೂರ, ಗುಲಬರ್ಗಾ ಜಿಲ್ಲೆ.
* ಅಮೃತಾ ಕಟಕೆ, ಕನ್ನಡ ಉಪನ್ಯಾಸಕಿ, ಸ. ಪ. ಕಾಲೇಜು, ಶಹಾಪೂರ.


---

## ಓದಿರಿ

---



PRINTED MATTER
BOOK-POST

ಶ್ರೀಮತಿ / ಶ್ರೀ

*


ಸಂಪಾದಕ, ಪ್ರಕಾಶಕ, ಮುದ್ರಕ, : ತಿಮ್ಮಯ್ಯ ಪುರ್ಲೆ

ಪುರ್ಲೆ ಪ್ರಿಂಟರ್ಸ್, ಶಹಾಪುರ-೫೮೫೨೨೩ (ಕಲಬುರ್ಗಿ ಜಿಲ್ಲೆ)